

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಎಂ.ಫಿಲ್.ಪದವಿಯ ಸಂಪ್ರಬಂಧ

# "ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ ಕಾದಂಬರಿಗಳಲ್ಲಿ ಭಾಷೆ ಮತ್ತು ಸಾಂಸ್ಕೃತಿಕ ಒಳನೋಟಗಳು"


ಸಂಶೋಧನಾ ವಿದ್ಯಾರ್ಥಿ
**ಅಂಬರೀಶ. ವಿ**

ಮಾರ್ಗದರ್ಶಕರು
**ಡಾ. ಪಿ.ವಿ. ನಾರಾಯಣ**





ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ
ಬೆಂಗಳೂರು


2007-08

552



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಎಂ.ಫಿಲ್.ಪದವಿಯ ಸಂಪ್ರಬಂಧ

# "ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ ಕಾದಂಬರಿಗಳಲ್ಲಿ ಭಾಷೆ ಮತ್ತು ಸಾಂಸ್ಕೃತಿಕ ಒಳನೋಟಗಳು"


*ಸಂಶೋಧನಾ ವಿದ್ಯಾರ್ಥಿ*
**ಅಂಬರೀಶ. ವಿ**

*ಮಾರ್ಗದರ್ಶಕರು*
**ಡಾ. ಪಿ.ವಿ. ನಾರಾಯಣ**










**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ
ಬೆಂಗಳೂರು


**2007-08**

# ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007-2008ನೇ ಸಾಲಿನ ಎಂ.ಫಿಲ್. ಪದವಿಗಾಗಿ "ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ ಕಾದಂಬರಿಗಳಲ್ಲಿ ಭಾಷೆ ಮತ್ತು ಸಾಂಸ್ಕೃತಿಕ ಒಳನೋಟಗಳು" ಎಂಬ ಸಂಪ್ರಬಂಧವನ್ನು ಅಂಬರೀಶ. ವಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ಈ ವಿದ್ಯಾರ್ಥಿಯ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

30/10/08

ದಿನಾಂಕ : 30-10-2008

ಸ್ಥಳ : ಬೆಂಗಳೂರು

(ಡಾ. ಪಿ.ವಿ. ನಾರಾಯಣ)

# ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ 2007-2008ನೇ ಸಾಲಿನ ಎಂ.ಫಿಲ್. ಪದವಿಗಾಗಿ **''ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ ಕಾದಂಬರಿಗಳಲ್ಲಿ ಭಾಷೆ ಮತ್ತು ಸಾಂಸ್ಕೃತಿಕ ಒಳನೋಟಗಳು''** ಎಂಬ ಸಂಪ್ರಬಂಧವನ್ನು ಡಾ. ಪಿ.ವಿ.ನಾರಾಯಣ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

ದಿನಾಂಕ : 30-10-2008

ಸ್ಥಳ : ಬೆಂಗಳೂರು

Ambi.V

(ಅಂಬರೀಶ. ವಿ)

# ಪರಿವಿಡಿ

# ಅಧ್ಯಾಯ - ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ದೀರ್ಘಕಾಲ ಬರವಣಿಗೆಯಲ್ಲಿ ತೊಡಗಿದ ಲೇಖಕನ ಸಾಹಿತ್ಯವು ಕಾಲದ ಅಂತರದಲ್ಲಿ ಹೊಸದಿಕ್ಕಿನೆಡೆಗೆ ಸಾಗುತ್ತದೆ. ಇದು ಸಾಹಿತ್ಯದ (ಬರವಣಿಗೆಯ) ಜೀವಂತಿಕೆಯ ಲಕ್ಷಣ ಇಲ್ಲದಿದ್ದರೆ ಕಾಲಘಟ್ಟಕ್ಕೂ ಬರವಣಿಗೆಗೂ ಇರುವ ಸಂಬಂಧದ ಹಳಿ ತಪ್ಪುತ್ತದೆ. ಕಾಲಕಾಲಕ್ಕೂ ತನ್ನ ಬರವಣಿಗೆ ಕ್ರಮವನ್ನು ಪುನರ್‌ರೂಪಿಸುತ್ತ, ಸಮಾಜಕ್ಕೆ ಮುಖಾಮುಖಿಯಾಗುವುದು ಸೃಜನಶೀಲ ಚಿಂತಕನ ಲಕ್ಷಣ. ಇಂತಹ ಸೃಜನಶೀಲತೆಯ ಚಿಂತನೆಯಲ್ಲಿ ತೇಜಸ್ವಿ ಅಗ್ರಸ್ಥಾನದಲ್ಲಿ ನಿಲ್ಲುತ್ತಾರೆ. ಬರವಣಿಗೆಯು ಕಾಲಕ್ಕೆ ಸ್ಪಂದಿಸದೆ ಯಾಂತ್ರಿಕಗೊಳ್ಳುತ್ತಿದೆ ಎಂದೆನಿಸಿದಾಗ, ಅದನ್ನು ಮೌಲ್ಯಮಾಪನ ಮಾಡಿ ಬದಲಾಗುತ್ತಿರುವ ಸನ್ನಿವೇಶಗಳ ಸವಾಲುಗಳನ್ನು ಎದುರಿಸಲು ಹೊಸದಿಗಂತಗಳನ್ನು ಕಂಡುಕೊಳ್ಳುವುದು ತೇಜಸ್ವಿಯವರ ಸಾಹಿತ್ಯದ ಮೂಲ ಲಕ್ಷಣ. ನವ್ಯದ ಅಬ್ಬರದ ಕಾಲದಲ್ಲಿ ಸಾಹಿತ್ಯ ಕೃಷಿಕೈಗೊಂಡು ಅದು ಯಾಂತ್ರಿಕವೆನಿಸಿದಾಗ ಹೊಸದಿಗಂತದೆಡೆಗೆ ಎಂಬ ಹಲವಾರು 'ಚಿಕಿತ್ಸಕ' ದೃಷ್ಟಿಕೋನಗಳನ್ನಿಟ್ಟುಕೊಂಡು, ಸಮಷ್ಟಿಯ ಪ್ರಜ್ಞೆಯನ್ನು ಕಾಲಘಟ್ಟದ ಕೇಂದ್ರವನ್ನಾಗಿಸಿಕೊಂಡು, ನೈತಿಕ ಪ್ರಜ್ಞೆಯ ಶೋಧವನ್ನು ನಡೆಸಿದರು. ನಂತರದಲ್ಲಿ ಮಾಯಾಲೋಕ ಕಾದಂಬರಿಯ ಸಂದರ್ಭದಲ್ಲಿ ಬದಲಾವಣೆಗಳ ಮಹಾಪೂರವೇ ಹರಿಯುತ್ತಿರುವಂತಹ ಸಂದರ್ಭದಲ್ಲಿ ಹೊಸನುಡಿಗಟ್ಟು, ಹೊಸ ಉಕ್ತಿಭಂಗಿ, ಹೊಸ ಅಭಿವ್ಯಕ್ತಿ ವಿಧಾನಗಳ ಬಗ್ಗೆ ಅನ್ವೇಷಣೆ ಮಾಡಬೇಕಾಗಿದೆ ಎಂಬುದು ಕಾಲಘಟ್ಟದ ವಿಮರ್ಶೆಯೂ ಹೌದು, ಕಾಲಕ್ಕೆ ಸ್ಪಂದಿಸುವ ವಿಶಿಷ್ಟಕ್ರಮವೂ ಹೌದು.

ತೇಜಸ್ವಿಯವರ ಸಾಹಿತ್ಯವು ಸದಾ ಶೋಧನೆಯಲ್ಲಿ ತೊಡಗುತ್ತದೆ. ಕುವೆಂಪುರವರು ಪ್ರಕೃತಿಯನ್ನು ಆರಾಧನಾ ಮನೋಭಾವದಿಂದ ಕಂಡರೆ ತೇಜಸ್ವಿ ವಿಸ್ಮಯಗಳನ್ನು ತನ್ನೊಳಗೆ ಅಡಗಿಸಿಕೊಂಡಿರುವ ಪ್ರಕೃತಿಯನ್ನು 'ಶೋಧನಾ' ಮನೋಭಾವದಿಂದ ಕಾಣುತ್ತಾರೆ. ಆದ್ದರಿಂದಲೇ ಅವರ ಸಾಹಿತ್ಯವು ವಿಸ್ಮಯದೊಂದಿಗೆ ಹೊಸ ಮಾಯಾಲೋಕವನ್ನು ಸೃಷ್ಟಿ ಮಾಡುತ್ತದೆ. ಇದು ದರ್ಶನ ಪ್ರಜ್ಞೆಯನ್ನು ಹೊಂದಿರುವ ಸೃಷ್ಟಿಶೀಲ ಲೇಖಕನ ಸಾಹಿತ್ಯದ ಗುಣ.

ತೇಜಸ್ವಿ ಸಾಹಿತ್ಯದ ಮತ್ತೊಂದು ಲಕ್ಷಣ ವಿಶ್ವಾತ್ಮಕ ಪ್ರಜ್ಞೆ. ಗ್ರಾಮೀಣ ಪರಿಸರವನ್ನು ಕಟ್ಟಿಕೊಡುವ ಕಥನಗಳು ವಿಶ್ವಾತ್ಮಕ ಶಕ್ತಿಗೆ ಮುಖಾಮುಖಿಯಾಗುವ ಕ್ರಮವನ್ನು ಶೋಧಿಸುತ್ತವೆ. ಆದ್ದರಿಂದಲೇ ತೇಜಸ್ವಿ ಸಾಹಿತ್ಯಕ್ಕೆ ಚೌಕಟ್ಟುಗಳನ್ನು, ಗಡಿಗಳನ್ನು ಆರೋಪಿಸುವುದು ತೇಜಸ್ವಿ ಸಾಹಿತ್ಯವನ್ನು ಪಾರ್ಶ್ವಿಕವಾಗಿ ನೋಡಿ ದಂತಾಗುತ್ತದೆ. ತೇಜಸ್ವಿಯವರ ನಿಲುವು ಧೋರಣೆಗಳು ವಿಭಿನ್ನ, ಸಾಮಾನ್ಯವಾಗಿ ಕನ್ನಡ ಸಾಹಿತಿಗಳೆಲ್ಲಾ ಹಳ್ಳಿಯಿಂದ ನಗರದ ಕಡೆಗೆ ಸಂಚರಿಸಿದರೆ, ತೇಜಸ್ವಿ ಅದಕ್ಕೆ ವ್ಯತಿರಿಕ್ತವಾಗಿ ಅನುಭವಗಳ ಬೆನ್ನೇರಿ ಗ್ರಾಮೀಣ ಪರಿಸರವನ್ನು ಪ್ರವೇಶಿಸಿದರು.

ಗ್ರಾಮೀಣ ಪ್ರದೇಶದ ಆಗುಹೋಗುಗಳನ್ನು, ಪ್ರಕೃತಿಯನ್ನು ತನ್ನ ಅನಭವದ ಕೇಂದ್ರವನ್ನಾಗಿಸಿಕೊಂಡರು. ಹೀಗೆ ಅನುಭವಗಳ ಬೆನ್ನೇರಿ ಹೊರಟ ತೇಜಸ್ವಿಯವರನ್ನು ರೂಪಿಸಿದ್ದು ಪರಿಸರ. ಆ ಪರಿಸರವನ್ನು ಶೋಧನಾ ಗುಣದಿಂದ ಕಾಣುವ ಮನೋಭಾವವೇ ಅವರ ಸಾಹಿತ್ಯ ಕೃಷಿ. ಜೊತೆಗೆ ಮನುಷ್ಯನ ನಿಗೂಢತೆಗಳನ್ನು ಅರಿಯುವ ಶೋಧನೆಯು ಅವರ ಸಾಹಿತ್ಯದಲ್ಲಿ ರೂಪಿತವಾಯಿತು. ನಂತರದ ಘಟ್ಟದಲ್ಲಿ ಸಮಾಜ ಕೇಂದ್ರಿತವಾಗಿ ರೂಪುಗೊಂಡ ತೇಜಸ್ವಿ ಬರವಣಿಗೆ ಹೊಸ ಹಾದಿಹಿಡಿದದ್ದು ಶೋಧನಾ ಗುಣದ ಫಲವಾಗಿಯೇ. ಅನಂತರದಲ್ಲಿ ವಿಜ್ಞಾನವನ್ನು ಜೀವಿಗಳ ಬಗೆಗಿರುವ ವಿಸ್ಮಯಗಳನ್ನು ತನ್ನೊಳಗೆ ಅಡಗಿಸಿಕೊಂಡು ತೇಜಸ್ವಿ ಯಾನ ಹೊರಟಿದ್ದು ಮತ್ತೊಂದು ಮಹತ್ವದ ಬೆಳವಣಿಗೆ, ವಿಜ್ಞಾನದ ವಿವರಣೆಗಳನ್ನೂ ಸಹ ಯಾವುದೇ ತೊಡಕಿಲ್ಲದೆ, ಭಾಷಾ ಕ್ಲಿಷ್ಟತೆಯಿಲ್ಲದೆ ನಿರೂಪಿಸುವುದು ಅವರ ಬರವಣಿಗೆಯ ವಿಶಿಷ್ಟ ಲಕ್ಷಣ. ಈ ನಿಟ್ಟಿನಲ್ಲಿ ನೋಡಿದಾಗ ತೇಜಸ್ವಿ ಕಾದಂಬರಿಗಳು ಸಾಂಸ್ಕೃತಿಕಲೋಕವನ್ನೇ ಹುದಿಗಿಸಿಟ್ಟುಕೊಂಡಿವೆ. ತೇಜಸ್ವಿ ಕಾದಂಬರಿಗಳ ಮುಖ್ಯ ಗುಣವು ಶೋಧನೆಯೇ. ನಿಗೂಢ ಮನುಷ್ಯರು ಕಾದಂಬರಿಯಲ್ಲಿ ವ್ಯಕ್ತಿಯ ಆಳಕ್ಕೆ ಇಳಿದು ವ್ಯಕ್ತಿಯ ಮತ್ತು ಪರಿಸರದ ನಿಗೂಢತೆಯನ್ನು ಶೋಧಿಸುವ ಕ್ರಮ ಅನನ್ಯವಾದದ್ದು. ಮನುಷ್ಯನ ಸ್ವರೂಪದ ಬಗ್ಗೆ ಸ್ವರೂಪ ಕಾದಂಬರಿಯಲ್ಲಿ ನಿವೇದನೆಯ ರೀತಿಯಲ್ಲಿ ತರ್ಕಿಸಿದ್ದು, ಸಿದ್ಧ ಮಾದರಿಗಳನ್ನು, ಜಡ ಸಂಪ್ರದಾಯವನ್ನು, ರೋಗಗ್ರಸ್ತ ಸಾಮಾಜಿಕ ವ್ಯವಸ್ಥೆಯನ್ನು ಬದಲಾಯಿಸಲು ಕ್ರಾಂತಿಯ ಪರಿಕಲ್ಪನೆಯನ್ನು ಚಿದಂಬರರಹಸ್ಯ ಕಾದಂಬರಿಯಲ್ಲಿ ಶೋಧಿಸಿದ್ದು, ಕ್ರಾಂತಿಗಾಗಿ ಯುವ ಪೀಳಿಗೆಯ ಜವಾಬ್ದಾರಿಯನ್ನು ಎಚ್ಚರಿಸಿದ್ದು, ಜಾಗತೀಕರಣದ ಸವಾಲುಗಳನ್ನು ಎದುರಿಸಲು 'ಜುಗಾರಿಕ್ರಾಸ್' ಕಾದಂಬರಿಯು ಹವಣಿಸಿದ್ದು, ಸದಾ

ತಣ್ಣಗಿರುವ ಮಲೆನಾಡಿನಲ್ಲಿ 'ತಲ್ಲಣ'ಗಳ ಬಗ್ಗೆ ಚಿಂತಿಸಿದ್ದು, ಕರ್ವಾಲೊ ಕಾದಂಬರಿಯಲ್ಲಿ 'ಸ್ಮೃತಿ'ಯನ್ನು ಬೆನ್ನು ಹತ್ತಲು ಆಧುನಿಕ ವಿಜ್ಞಾನವೂ, ದೇಸಿಯತೆಯೊಂದಿಗೆ ಶೋಧಕ್ಕೆ ಹೊರಟಿದ್ದು, ಮಾಯಾಲೋಕ ಕಾದಂಬರಿಯಲ್ಲಿ ಕ್ಷುಲ್ಲಕ ಘಟನೆಗಳೂ ಸಹ ಜೀವನದಲ್ಲಿ ಮುಖ್ಯವಾಗುತ್ತವೆ. ಕ್ಷುದ್ರ ಎನಿಸುವ ವಿವರಗಳು ಸಹ ಅಗಾಧವಾದ ಪರಿಣಾಮವನ್ನು ಉಂಟುಮಾಡುತ್ತವೆ ಎಂದು ಮನಗಂಡಿದ್ದ ತೇಜಸ್ವಿಯವರು ಮಾಯಾಲೋಕವನ್ನು ಸೃಷ್ಟಿಸಿದರು. ಮಾಯಾಲೋಕ ಕಾದಂಬರಿಯಲ್ಲಿ ನಾವು ಆಲಕ್ಷ್ಯ ಮಾಡುವ ಸಂಗತಿಗಳೇ ಬದುಕಿನ ಗತಿಯನ್ನು ನಿರ್ಧರಿಸುತ್ತವೆ ಎಂಬುದನ್ನು ತೇಜಸ್ವಿ ತಮ್ಮದೇ ಆದ ಧಾಟಿಯಲ್ಲಿ ತೆರೆದಿಟ್ಟಿದ್ದಾರೆ.

ಸಾಹಿತಿಗೆ ಭಾಷೆಯು ಅನಿವಾರ್ಯ ಸಾಧನ, ಭಾಷೆಯಿಲ್ಲದೆ ತನ್ನ ಅನುಭವಗಳನ್ನು, ಚಿಂತನೆಗಳನ್ನು ಕಟ್ಟಿಕೊಡಲು ಸಾಧ್ಯವಿಲ್ಲ. ಇಷ್ಟು ಅನಿವಾರ್ಯವಾದ ಭಾಷೆಯು ತನ್ನೊಳಗೆ ಒಂದು ಜಗತ್ತನ್ನು ಅಡಗಿಸಿಟ್ಟುಕೊಂಡು ಅದನ್ನು ಓದುಗರಿಗೆ ದರ್ಶಿಸುತ್ತದೆ. ಭಾಷೆಯು ತನ್ನೊಳಗೆ ಅಂತರ್ಗತವಾಗಿಸಿಕೊಂಡಿರುವ, ಭಾಷೆಯ ಮೂಲಕ ವ್ಯಕ್ತವಾಗುವ ಸಂಸ್ಕೃತಿಯನ್ನು ಗ್ರಹಿಸುವ ಕ್ರಮದಿಂದ ಈ ಅಧ್ಯಯನ ಸಾಗುತ್ತದೆ.

ತೇಜಸ್ವಿ ಕಾದಂಬರಿಗಳಲ್ಲಿ ಭಾಷೆಯು ನವಿರಾದ ಹಾಸ್ಯದ ಮುಖಾಂತರ ವ್ಯಕ್ತವಾದರು. ತನ್ನೊಳಗೆ ಹಲವಾರು ದುರಂತಗಳನ್ನು ಇಟ್ಟುಕೊಂಡಿದೆ. ನಮಗೆ ಕಾಣದ ಒಂದು ಜಗತ್ತನ್ನು ಅದು ಹೊಂದಿದೆ. ಈ ಜಗತ್ತನ್ನು ಪ್ರವೇಶಿಸುವ ಒಂದು ಸಣ್ಣಪ್ರಯತ್ನ ಈ ಅಧ್ಯಯನ. ಭಾಷೆಯನ್ನು ಸಾಂಸ್ಕೃತಿಕವಾಗಿ ಅಧ್ಯಯನ ಮಾಡುವಾಗ ಭಾಷೆ ಮತ್ತು ಸಂಸ್ಕೃತಿಗಳ ಅಂತಃಸಂಬಂಧ ಮುಖ್ಯವೆನಿಸುತ್ತದೆ. ಭಾಷೆ ಎನ್ನುವುದು ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಎಷ್ಟರ ಮಟ್ಟಿಗೆ ಯಶಸ್ವಿಯಾಗಿದೆ ಎನ್ನುವುದು ಮುಖ್ಯ.

ಭಾಷೆಯ ಮುಖಾಂತರ ಸಂಸ್ಕೃತಿಯನ್ನು ತಿಳಿಯುವಾಗ ತೇಜಸ್ವಿಯವರ ಸಾಹಿತ್ಯದಲ್ಲಿ ಅಗಾಧವಾಗಿ ಕಾಣಿಸಿಕೊಂಡಿರುವ ಪ್ರಕೃತಿಯು ಮುಖ್ಯವೆನಿಸುತ್ತದೆ. ಇಂತಹ ಪ್ರಕೃತಿಯ ಒಡಲಲ್ಲಿ ನಡೆಯುವ 'ಸಾಂಸ್ಕೃತಿಕ' ವಿವರಗಳು ವಿಶ್ವಾತ್ಮಕ ದೃಷ್ಟಿಯನ್ನು ಹೊಂದಿರುತ್ತದೆ. ಚೀಂಕ್ರಮೇಸ್ತ್ರಿಯನ್ನು ವಿಶ್ವದ ದಾರ್ಶನಿಕ ಅರಿಸ್ಟಾಟಲ್‌ನೊಂದಿಗೆ ಹೋಲಿಸುವುದು. ಗ್ರಾಮೀಣ ಪರಿಸರದ ಕೂಸಾದ ಚೀಂಕ್ರಮೇಸ್ತ್ರಿಯ ಮುಖಾಂತರ ವಿಶ್ವಾತ್ಮಕ ಪ್ರಜ್ಞೆಗೆ ಮುಖಾಮುಖಿಯಾಗುವುದಾಗಿದೆ. ಆದ್ದರಿಂದ ಪ್ರಕೃತಿಯ ಅಧ್ಯಯನವು

ಮುಖ್ಯವೆನಿಸಿದೆ. ಸಂಸ್ಕೃತಿಯೆಂಬ ಪರಿಕಲ್ಪನೆ ಕನ್ನಡ ಸಾಹಿತ್ಯದ ಮಟ್ಟಿಗೆ ವಿಶಿಷ್ಟವಾದದ್ದು. ಈ ಪರಿಕಲ್ಪನೆಯು ಕಾಲಕ್ಕೆ ತಕ್ಕಂತೆ ಪಲ್ಲಟಗೊಳ್ಳುತ್ತದೆ, ಪಲ್ಲಟಗೊಂಡಂತೆ ಅದರ ವ್ಯಾಪ್ತಿಯು ಹೆಚ್ಚಾಗುತ್ತಾ ಹೋಗುತ್ತದೆ. ಈ ನಿಟ್ಟಿನಲ್ಲಿ ಸಂಸ್ಕೃತಿಯೆಂಬ ಪರಿಕಲ್ಪನೆಯೊಳಗೆ ಬರಬಹುದಾದ ತೇಜಸ್ವಿ ಕಾದಂಬರಿಗಳಲ್ಲಿ ಕಾಣುವ ಅಂಶಗಳ ಬಗ್ಗೆ ಅಧ್ಯಯನ ಮಾಡುವ ಉದ್ದೇಶವು ಇದೆ. ಅದಲ್ಲದೆ ಕಾದಂಬರಿಯಲ್ಲಿರುವ ವಿಭಿನ್ನ ಸಾಂಸ್ಕೃತಿಕ ಜಗತ್ತನ್ನು ಪರಿಚಯಿಸಿಕೊಳ್ಳುವ ಉದ್ದೇಶವು ಇದೆ. ತೇಜಸ್ವಿ ಸಾಹಿತ್ಯ ಪಲ್ಲಟಗಳಿಗೆ ಒಳಗಾಯಿತು. ಅಂತಹ ಪಲ್ಲಟಗಳಿಗೆ ಕಾರಣಗಳನ್ನು ಹುಡುಕುವ ಮತ್ತು ಪಲ್ಲಟಗಳ ಪ್ರಸ್ತುತತೆಯನ್ನು ಅರಿಯುವ ಪ್ರಯತ್ನವು ಇದಾಗಿದೆ. ತೇಜಸ್ವಿ ಕಾದಂಬರಿಯಲ್ಲಿ ನಾನಾ ನಮೂನೆಯ ಪಾತ್ರಗಳು ವ್ಯಕ್ತವಾಗಿದೆ. ಅವುಗಳ ಜೀವನ ಪ್ರೀತಿ, ಸಂಘರ್ಷ ಇವುಗಳನ್ನು ಸಹ ಕಂಡುಕೊಳ್ಳುವ ಪ್ರಯತ್ನಕ್ಕೆ ಈ ಅಧ್ಯಯನ ಅಡಿಗಲ್ಲಾಗಲಿದೆ. ತೇಜಸ್ವಿಯವರನ್ನು ಪ್ರಭಾವಿಸಿದ ಪರಿಸರ, ಅಂತಹ ಪರಿಸರದ ಬಗ್ಗೆ ಆಸಕ್ತಿಮೂಡಿಸಿದ ಕುವೆಂಪುರವರ ಪ್ರಕೃತಿಯ ಆರಾಧನಾ ಗುಣದ ಬಗ್ಗೆಯು ಶೋಧನೆ ಮಾಡುವ ಉದ್ದೇಶವಿದೆ.

# ಅಧ್ಯಾಯ - ೨

## ತೇಜಸ್ವಿ ಕಾದಂಬರಿಗಳಲ್ಲಿ ಪ್ರಕೃತಿಯ ಚಿತ್ರಣ

ಪರಿಸರವು ಲೇಖಕನ ಪ್ರಜ್ಞೆಯ ಮೇಲೆ ಬೀರುವ ಪರಿಣಾಮವು ಮಹತ್ವವಾದುದು. ಅದೇ ನಿಟ್ಟಿನಲ್ಲಿ ಪರಿಸರವು ಲೇಖಕನ ಸಾಹಿತ್ಯ ಸೃಷ್ಟಿಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿರುವ ಉದಾಹರಣೆಗಳು ಕೂಡ ಕನ್ನಡ ಸಾಹಿತ್ಯದಲ್ಲಿ ಯತೇಚ್ಛವಾಗಿ ದೊರೆಯುತ್ತವೆ. ಪ್ರಕೃತಿಯ ಕವಿ ಎಂದೇ ಹೆಸರಾಗಿರುವ ಕುವೆಂಪುರವರ ಸಾಹಿತ್ಯದ ಜೀವ ದ್ರವ್ಯ ಪ್ರಕೃತಿ.

ಜಾಗತಿಕ ಸಾಹಿತ್ಯದಲ್ಲಿ ಕಾಳಿದಾಸ, ವರ್ಡ್ಸ್‌ವರ್ತ್, ಪ್ರಕೃತಿಯ ಕವಿಗಳೆಂದು ಹೆಸರು ಪಡೆದಿದ್ದಾರೆ. ಪ್ರಕೃತಿ ಮಾತೆಯ ಮಡಿಲಿನಲ್ಲಿ ಬೆಳೆದ ಕುವೆಂಪುರವರು ಪ್ರಕೃತಿಯನ್ನು ಆರಾಧನಾ ದೃಷ್ಟಿಯಿಂದ ನೋಡಿ ಅದರಲ್ಲಿಯೇ ಆಧ್ಯಾತ್ಮವನ್ನು ಶೋಧಿಸಿದರು. ಪ್ರಕೃತಿಯನ್ನು ದಿಟ್ಟವಾಗಿ ನೋಡುತ್ತಲೇ ಅದರಲ್ಲಿ ಲೀನವಾಗುವ ಕುವೆಂಪುರವರ ಆಧ್ಯಾತ್ಮಿಕ ದೃಷ್ಟಿಕೋನ ವಿಭಿನ್ನ.

'ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ ;
ಮಲೆಯನಾಡಿಗೆ ಮಳೆಯ ಬೀಡಿಗೆ, ಸಿರಿ ಚೆಲುವಿನ ರೂಢಿಗೆ;
ಬೇಸರಾಗಿದೆ ಬಯಲು, ಹೋಗುವೆ ಮಲೆಯ ಕಣಿವೆಯ ಕಾಡಿಗೆ ;
ಹಸಿರು ಸೊಂಪಿನ ಬಿಸಿಲು ಕಂಪಿನ ಗಾನದಿಂಪಿನ ಕೂಡಿಗೆ;'

ಈ ರೀತಿಯಾಗಿ ಮಲೆನಾಡಿನ ಬಗ್ಗೆ ಉತ್ಕಟ ಪ್ರೇಮವನ್ನು ವ್ಯಕ್ತಪಡಿಸುವ ಕುವೆಂಪುರವರನ್ನು ಪ್ರಕೃತಿಯು ತನ್ನ ವಿಸ್ಮಯಗಳಿಂದ, ಸೊಬಗಿನಿಂದ ಆಕರ್ಷಿಸಿತ್ತೆಂದರೆ ಅದು ಪ್ರಕೃತಿಯ ವಿಶಿಷ್ಟ ಶಕ್ತಿಯೇ ಸರಿ.

ಕುವೆಂಪುರವರ ವಿವಿಧ ಸಾಹಿತ್ಯದ ಪ್ರಕಾರಗಳಲ್ಲಿ ಪ್ರಕೃತಿಯ ಚಿತ್ರಣ ಸರಾಗವಾಗಿ ರೂಪುಗೊಂಡಿದೆ. ಕಾವ್ಯ,ಮಹಾಕಾವ್ಯ,ಕಾದಂಬರಿ ಆತ್ಮಕತೆ, ನಾಟಕ ಹೀಗೆ ನಾನಾ ವಿಧದ ಸಾಹಿತ್ಯರಾಶಿಯಲ್ಲಿ ತಟ್ಟನೆ ಗೋಚರವಾಗುವುದು ಕುವೆಂಪುರವರ ಕವಿ ಪ್ರಜ್ಞೆಯನ್ನು ಪೋಷಿಸಿದ ಮಹತ್ವದ ಪ್ರಕೃತಿಯೇ.

ಸುಂದರವಾದ ಗಿರಿವನಗಳಿಂದಲೇ ಹಸಿರುಕೋಟೆಯನ್ನು ನಿರ್ಮಿಸಿಕೊಂಡಿರುವ ಮಲೆನಾಡಿನಲ್ಲಿ ಜನಿಸಿ ರಾಷ್ಟ್ರಕವಿ ಎಂಬ ಕೀರ್ತಿಗೆ ಭಾಜನರಾದ ಕುವೆಂಪುರವರ ಪುತ್ರನೇ ಪೂರ್ಣಚಂದ್ರತೇಜಸ್ವಿ. ಇಂತಹ ಸುಂದರ ವಿಸ್ಮಯದ ಮಲೆನಾಡಿನಲ್ಲಿ ಜನಿಸಿದ ತೇಜಸ್ವಿಯವರನ್ನೂ ಸಹ ಈ ಪ್ರಕೃತಿಯು ಆಕರ್ಷಿಸದೇ ಬಿಡಲಿಲ್ಲ. ತೇಜಸ್ವಿಯವರು ಜನಿಸಿದ್ದು ಶಿವಮೊಗ್ಗದಲ್ಲಾದರೂ ಬಹುತೇಕ ಬೆಳೆದದ್ದೆಲ್ಲಾ ಮೈಸೂರಿನಲ್ಲಿ. ಕುವೆಂಪುರವರು ಹಳ್ಳಿಯಿಂದ ನಗರಕ್ಕೆ ಬಂದು ತಮ್ಮ ಸಾಹಿತ್ಯ ಕೃಷಿಯನ್ನು ಕೈಗೊಂಡರೆ ತೇಜಸ್ವಿಯವರು ನಗರದಿಂದ ಹಳ್ಳಿಗೆ ಮರಳಿ ತಮ್ಮ ಸಾಹಿತ್ಯವನ್ನು ಸೃಷ್ಟಿಸಿದರು. ಕುವೆಂಪುರವರು ಮಲೆನಾಡಿಗೆ ಹೋಗುವ ಬಯಕೆ ಅದಮ್ಯವಾಗಿದ್ದರೂ ಅದು ಯಶಸ್ವಿಯಾಗುವುದಿಲ್ಲ. ಆದರೆ ತೇಜಸ್ವಿಯವರು ಯಾವುದೇ ಉದ್ಯೋಗವನ್ನು ನಗರದಲ್ಲಿ ಕೈಗೊಳ್ಳದೇ ಅನುಭವಗಳ ಬೆನ್ನೇರಿ ಕಾಡಿನ ಗರ್ಭದಲ್ಲಿರುವ ಒಂದು ವಿಶಿಷ್ಟ ಸಂಸ್ಕೃತಿಯ ನೆಲೆಯನ್ನು ಹೊಕ್ಕ ಪರಿ ಆಶ್ಚರ್ಯಕರ.

ತೇಜಸ್ವಿಯವರಿಗೆ ಅನುಭವಗಳ ಬೆನ್ನೇರಿ ಹೋಗಬೇಕೆಂಬ ಅದಮ್ಯ ಬಯಕೆ ಉಂಟಾಗಲು ಪ್ರೇರಣೆಗಳು ಮತ್ತು ಅವರ ಇಚ್ಛಾಶಕ್ತಿಯ ಹಿಂದೆ ಕೆಲಸ ಮಾಡಿರುವ ಅಂಶಗಳಾವುವು ಎಂಬ ಅಂಶ ಕುತೂಹಲಕರವಾದದ್ದು. ಇಂದು ನಗರೀಕರಣ, ಜಾಗತೀಕರಣ ಎಂಬ ಹೆಸರಿನಲ್ಲಿ ಹಳ್ಳಿಯ ಜನ ಪಟ್ಟಣಕ್ಕೆ ವಲಸೆ ಬರುತ್ತಿರುವಂತಹ ಸಂದರ್ಭದಲ್ಲಿ ಮತ್ತು ಕನ್ನಡ ಸಾರಸ್ವತ ಲೋಕದ ದಿಗ್ಗಜ ಕವಿಗಳೆಲ್ಲ 'ನಗರ'ವನ್ನು ತನ್ನ ಕೇಂದ್ರನೆಲೆಯನ್ನಾಗಿ, ಆವಾಸಸ್ಥಾನವನ್ನಾಗಿ ಮಾಡಿಕೊಂಡಿರುವಂತಹ ಸಂದರ್ಭದಲ್ಲಿ ತೇಜಸ್ವಿರವರ ವ್ಯತಿರಿಕ್ತವಾದ ಚಲನೆ, ವಿಶಿಷ್ಟವಾದಂತಹ ದೃಷ್ಟಿಕೋನ ಅವುಗಳ ಫಲವೇ ನಮ್ಮ ಮುಂದಿರುವ ವಿಭಿನ್ನ ಬಗೆಯ, ಕನ್ನಡ ಸಾಂಸ್ಕೃತಿಕ ಲೋಕವನ್ನು ಪ್ರತಿನಿಧಿಸುವ, ಸಾಹಿತ್ಯದ ಒಪ್ಪಿತ ಮೌಲ್ಯಗಳನ್ನು ಮೀರುವ, ಸಾಹಿತ್ಯವೆಂದರೆ ಹೀಗೆ ಇರಬೇಕೆಂಬ ಕಟ್ಟುಪಾಡುಗಳನ್ನು ದಾಟಿ ನಿಂತಿರುವ ತೇಜಸ್ವಿ ಸಾಹಿತ್ಯ ಕೃಷಿ.

ತೇಜಸ್ವಿರವರ ಸಾಹಿತ್ಯದಲ್ಲಿಯೂ ಸಹ ಕುವೆಂಪುರವರ ಸಾಹಿತ್ಯದಂತೆ ಪ್ರಕೃತಿಯು ಕಂಡುಬರುತ್ತದೆ. ಕುವೆಂಪುರವರು ತಮ್ಮ ಸಾಹಿತ್ಯದಲ್ಲಿ ಅಪಾರವಾದ ಪ್ರಕೃತಿಯ ಚಿತ್ರಣಕ್ಕೆ ತಾವೇ ಕಾರಣವನ್ನು ನೀಡಿದ್ದಾರೆ.

'ನಾನು ಮಲೆನಾಡಿಗನು, ಮಲೆನಾಡಮ್ಮನ ಹೊಟ್ಟೆಯಲ್ಲಿ ಹುಟ್ಟಿ ಮಡಿಲಲ್ಲಿ ಬೆಳೆದು ತೊಡೆಯ ಮೇಲೆ ನಲಿದು ಆ ತಾಯಿಯ ಮೊಲೆ ಹಾಲು ಕುಡಿದು ಬೆಳೆದು ಬಂದವನು, ಮಲೆನಾಡೆಂದರೆ ನನಗೆ ಬಹಳ ಮಮತೆ. ಒಂದು ವಿಧವಾದ ಕುರುಡು

ಮೋಹ ಎನ್ನಬಹುದು, ಮಲೆನಾಡು ಸೊಬಗಿನ ಬೀಡು; ಸಿಡಿಲು ಮಿಂಚುಗಳ ನಾಡು; ಸಾಲು ಸಾಲಾಗಿ ಎದ್ದಿರುವ ಬೆಟ್ಟಗಳು; ಮಾಲೆಮಾಲೆಯಾಗಿ ಬೆಳೆದಿರುವ ಕಾಡುಗಳು; ಅಲ್ಲಲ್ಲಿ ಬನ ಬೆಟ್ಟಗಳ ನಡುವೆ, ಹರಿಯುವ ಹೊಳೆ ತೊರೆಗಳು; ಕಾಡಿನ ಮೇಲೆ ಮಲಗುವ ಬಿಸಿಲು ಬೆಳ್ದಿಂಗಳು; ವಿಧವಿಧವಾಗಿ ಇಂಚರಗೈವ ಸಾವಿರಾರು ಬಣ್ಣ ಬಣ್ಣದ ಹಕ್ಕಿಗಳು; ಅನವರತ ಶ್ಯಾಮಲ ವನಶ್ರೇಣಿಗಳಿಂದ ಆವೃತವಾದ ಧೀರ ಸಹ್ಯಾದ್ರಿ ಪರ್ವತಗಳ ಕಂದರ ಮಾರ್ಗಗಳಲ್ಲಿ ಮಂಜುಳ ನಾದದಿಂದ ಪ್ರವಹಿಸುವ ತುಂಗೆ, ಭದ್ರೆ, ಶರಾವತಿಯರು, ಶೃಂಗೇರಿ, ಮೊದಲಾದ ಪವಿತ್ರ ಪುರಾಣ ಕ್ಷೇತ್ರಗಳ ಗೇರುಸೊಪ್ಪೆ ಮೊದಲಾದ ದರ್ಶನೀಯ ಪ್ರಕೃತಿ ಸೌಂದರ್ಯ ಸ್ಥಾನಗಳು ಇವೆಲ್ಲವುಗಳಿಂದ ಮೋಹಿತನಾದ ನನಗೆ ಮಲೆನಾಡೆಂದರೆ ಬಹಳ ಮಮತೆ.'' (ಶಿವಮೊಗ್ಗ ಕರ್ನಾಟಕ ಸಂಘದ ಆರಂಭೋತ್ಸವ ಭಾಷಣ, ೮/೧೧/೧೯೩೦, ಪುಟ. ೧೦-೧೧, ಸಾಹಿತ್ಯ ಪ್ರಚಾರ: ಆರು ಭಾಷಣಗಳು, ಉದಯರವಿ ಪ್ರಕಾಶನ, ಮೈಸೂರು)

ಮಲೆನಾಡಿನಲ್ಲಿ ಹುಟ್ಟಿದ ಕುವೆಂಪು ಪ್ರಕೃತಿಯನ್ನು ಮಾತೆಯ ಸ್ವರೂಪದಲ್ಲಿ ಕಾಣುವ ಮನೋಧರ್ಮ ವಿಶಿಷ್ಟವಾದದ್ದು. ಮಲೆನಾಡಮ್ಮ ಎಂದು ಕರೆದಿರುವುದು ಔಚಿತ್ಯವೇ ಸರಿ. ಏಕೆಂದರೆ ತಾಯಿಯ ವಿಶಿಷ್ಟಗುಣಗಳನ್ನು ಮಗನು ಆರಾಧಿಸುವಂತೆ, ಪ್ರಕೃತಿಯನ್ನು ಆರಾಧಿಸುವ ಕುವೆಂಪುರವರ ಮನೋಭಾವ ವಿಶಿಷ್ಟವಾದದ್ದು.

ಮಲೆನಾಡಿನ ಬನ, ಜಲ, ವಿಶಿಷ್ಟ ಬಗೆಯ ಪ್ರಾಣಿಗಳು ಅಲ್ಲಿನ ಪರಿಸರ ಎಂತಹವರನ್ನು ಮಂತ್ರಮುಗ್ಧರನ್ನಾಗಿಸುತ್ತದೆ. ವಿಶೇಷವಾಗಿ ಕವಿ ಪ್ರಜ್ಞೆಯುಳ್ಳವರನ್ನು ತನ್ನೆಡೆಗೆ ಆಕರ್ಷಿಸಿ ಮಾಯಾಲೋಕದಲ್ಲಿ ವಿಹಾರವನ್ನು ಮಾಡಿಸುತ್ತದೆ. ಇಂತಹ ನಿಸರ್ಗದ ಅನುಭವ ಕೇವಲ ಇಂದ್ರಿಯ ಸುಖಗಳಿಗೆ ಮೀಸಲಾಗಿರದೆ ಕುವೆಂಪುರವರಲ್ಲಿ 'ಆಧ್ಯಾತ್ಮದ' ಉನ್ನತವಾದ ಮಟ್ಟಕ್ಕೆ ಏರಿತು.

ಕುವೆಂಪುರವರು ಪ್ರಕೃತಿಯನ್ನು ಕಾಣುವುದು ಆರಾಧನಾ ಮನೋಭಾವದಿಂದ. ಈ ದೃಷ್ಟಿಕೋನವು ಮತ್ತು ಕುವೆಂಪುರವರ ಮಗನಾಗಿ ತೇಜಸ್ವಿ ಪಡೆದ ಅನುಭವಗಳು, ಈ ಅನುಭವಗಳೇ ತೇಜಸ್ವಿಯವರನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದವೇ ಎಂಬ ಪ್ರಶ್ನೆ ತಾರ್ಕಿಕವಾಗಿ ಮುಖ್ಯವಾದುದು. ತೇಜಸ್ವಿಯವರ ಸೂಕ್ಷ್ಮ ಪ್ರಜ್ಞೆಯೇ, ಪರಿಸರದಲ್ಲಿರುವ ಅಸಂಖ್ಯಾತ ವಿಸ್ಮಯಗಳನ್ನು ಕಾಣುವ ಮನೋಧರ್ಮಕ್ಕೆ ಉದಾಹರಣೆಯಾಗಿದೆ.

ತೇಜಸ್ವಿಯವರು ಚಿಕ್ಕ ವಯಸ್ಸಿನಲ್ಲಿ ತಮ್ಮ ತಂದೆಯವರೊಡನೆ ವಾಕಿಂಗ್ ಹೋಗುತ್ತಿದ್ದ ಸಂದರ್ಭ ತೇಜಸ್ವಿರವರ ಮನೆಯ ಎದುರುಗಡೆ, ಕುರುಚಲು ಪೊದೆಗಳ ಬಯಲು ಇದ್ದದ್ದು ಈಗ ಸೈಟುಗಳಾಗಿವೆ ಎಂದು ತೇಜಸ್ವಿ ಪ್ರಕೃತಿಯು ಪಲ್ಲಟಗೊಂಡು ನಗರೀಕರಣದ ಹಾದಿ ಹಿಡಿದಿರುವುದನ್ನು ಗಮನಿಸಿದ್ದಾರೆ. ಅಲ್ಲಿ ಕಾಡಾಗಲೀ, ಕಾಡು ಪ್ರಾಣಿಗಳಾಗಲಿ ಇರಲಿಲ್ಲವೆಂದು ಅಲ್ಲಿದ್ದ ಪ್ರಾಣಿಗಳೆಂದರೆ ಓತಿಕ್ಯಾತ, ಹಾವುರಾಣಿ, ಹಾವು, ಮೊಲಗಳು ಮಾತ್ರ ಇದ್ದವು. ಅದನ್ನೇ ಪೇಟೆಯವರು ಕಾಡು ಎಂದು ಕರೆಯುತ್ತಿದ್ದರು.

ಅಂದರೆ ಮಲೆನಾಡಿನ ಪರಿಸರದಲ್ಲಿ ಹುಟ್ಟಿದಂತಹ ತೇಜಸ್ವಿರವರು 'ಕಾಡು ಎಂಬುದನ್ನು ಗ್ರಹಿಸಿರುವುದಕ್ಕೂ, ಪೇಟೆಯ ಜನಗಳು 'ಕಾಡು'ಎಂಬ ಪದವನ್ನು ಬಳಸಿರುವುದಕ್ಕೆ ವ್ಯತ್ಯಾಸವಿದೆ. ಈ ಕುರುಚಲು ಪೊದೆಗಳ ಬಯಲು ಪ್ರದೇಶದ ಬಳಿ ಕಾಲು ಹಾದಿಯಲ್ಲಿ ವಾಕಿಂಗ್ ಮಾಡುತ್ತಿರುವ ಸಂದರ್ಭದಲ್ಲಿ ಕೆಲವು ಬಿಲಗಳನ್ನು ತೇಜಸ್ವಿಯವರು ಕಂಡರಂತೆ. ಅವು ಕಾಡಿನ ಇಲಿಯ ಬಿಲಗಳು ಅವುಗಳಲ್ಲಿ ಕುಚ್ಚಿನ ಬಾಲದ ಕಾಂಗ್ರೋ ಕಾಡಿಲಿಗಳು ಇರುತ್ತವೆ ಎಂದು ಕುವೆಂಪುರವರು ತೇಜಸ್ವಿಯವರಿಗೆ ತಿಳಿಸಿದರಂತೆ. 'ಆ ಬಿಲದೊಳಗೆ ಪ್ರಾಣಿಗಳು ಇರಬಹುದೆಂಬ ನಂಬಿಕೆ ತೇಜಸ್ವಿಯವರಿಗೆ ಬರಲಿಲ್ಲ. ಆ ಬಿಲಗಳು 'ಜಡವಾಗಿ' ನಿರ್ಜೀವದಂತೆ ಕಂಡು ಬಂದಿದ್ದವಂತೆ.

ತೇಜಸ್ವಿ ಮತ್ತು ಅವರ ತಮ್ಮನಾದ ಚೈತ್ರ ಸೇರಿ ಅಲ್ಲಿದ್ದ ಚಿಕ್ಕ ಚಿಕ್ಕ ಹರಳುಗಳನ್ನು ಆ ಬಿಲಗಳ ಬಾಯೊಳಗೆ ತುಂಬಿ ಮುಚ್ಚಿಬಿಟ್ಟಿದ್ದರಂತೆ, ಮರುದಿನ ಅದೇ ದಾರಿಯಲ್ಲಿ ಯಥಾಪ್ರಕಾರವಾಗಿ ತೇಜಸ್ವಿ, ಕುವೆಂಪು ವಾಕಿಂಗ್ ಹೋಗುವಾಗ ಆ ಬಿಲಗಳನ್ನು ಕಂಡಾಗ ಅಲ್ಲಿದ್ದ ಕಲ್ಲುಗಳು ಮಾಯವಾಗಿದ್ದವಂತೆ, ಇಲಿಗಳು ರಾತ್ರಿ ಯಾವಾಗಲೋ ಹೊರಗಡೆ ಬಂದು ಆ ಕಲ್ಲುಗಳನ್ನು ಹೊರಗಡೆ ಸಾಗಿಸಿ ತಮ್ಮ ಅವಾಸಸ್ಥಾನವನ್ನು ಮಾಮೂಲಿನಂತೆ ಮಾಡಿಟ್ಟಿದ್ದವಂತೆ, ಚಿಕ್ಕ ವಯಸ್ಸಿನಲ್ಲಿಯೇ ಇಂತಹ 'ವಿಸ್ಮಯ'ವನ್ನು ಕಂಡಂತಹ ತೇಜಸ್ವಿಯವರಿಗೆ ಆದಂತಹ ಆಶ್ಚರ್ಯ ಅಪಾರವಾದದ್ದು. ಇಲಿಗಳೇ ಆ ಕಲ್ಲುಗಳನ್ನು ಆಚೆಗೆ ಸಾಗಿಸಿದವೆಂದು ಕುವೆಂಪುರವರು ತಿಳಿಸಿದ ಮಾತುಗಳನ್ನು ಕೇಳಿ ತೇಜಸ್ವಿ ಮತ್ತು ಅವರ ಸಹೋದರ ತುಂಬಾ ಆಶ್ಚರ್ಯಪಟ್ಟರು ಮತ್ತು ಕುವೆಂಪುರವರು ಇಲಿಗಳ ಹೆಜ್ಜೆ ಗುರುತುಗಳನ್ನು ತೋರಿಸಿ ಒಮ್ಮೊಮ್ಮೆ ಇಲಿಗಳನ್ನು ಹಿಡಿಯಲು ಹಾವು ಬಿಲದೊಳಗೆ ನುಗ್ಗುತ್ತವೆ ಎಂದು, ಆಗ ಇಲಿಗಳು ಬೇರೊಂದು ಕಡೆ ಮಾಡಿಕೊಂಡಿರುವ ಕಳ್ಳ ಹೊರದಾರಿಗಳ ಮುಖಾಂತರ ಪರಾರಿ ಕೀಳುತ್ತವೆ ಎಂದು ಕುವೆಂಪುರವರು ತೇಜಸ್ವಿರವರಿಗೆ

ತಿಳಿಸಿದರಂತೆ, ಆಗ ಅಕ್ಕಪಕ್ಕದಲ್ಲಿ ಹುಡುಕಾಡಿ ಪೊದೆಗಳ ಅಡಿಯಲ್ಲಿ ಹೊಲಗಳ ತೆವರಿಗಳಲ್ಲಿ ಮಾಡಿಕೊಂಡಿದ್ದ ಕಳ್ಳದಾರಿಗಳನ್ನು ಎಲ್ಲರೂ ಸೇರಿ ಪತ್ತೆ ಮಾಡಿದ ಕಥೆ ರೋಚಕವಾದದ್ದು.

ಈ ಅನುಭವಗಳನ್ನು ತೇಜಸ್ವಿಯವರು ತಮ್ಮ ಪರಿಸರದ ಕತೆ ಎಂಬಲ್ಲಿ ವಿವರಿಸಿದ್ದಾರೆ, ಒಬ್ಬ ಲೇಖಕನ ಮೇಲೆ ಪ್ರಭಾವ ಬೀರಿದ ಅಂಶಗಳನ್ನು ವಿಮರ್ಶಕನು ಗುರುತಿಸುವ ಸಂದರ್ಭಗಳೇ ಹೆಚ್ಚು. ಆದರೆ ಕುವೆಂಪು ಮತ್ತು ತೇಜಸ್ವಿರವರ ವಿಚಾರದಲ್ಲಿ ಈ ಕೆಲಸ ಲೇಖಕರಿಂದಲೇ ಆಗಿದೆ. ತೇಜಸ್ವಿರವರು ಅಂದು ಕಂಡ ಇಲಿಗಳ ವಿಶಿಷ್ಟ ಜೀವನಕ್ರಮವು ಪರಿಸರದ ಬಗ್ಗೆ ಜೀವ ಜಗತ್ತಿನ ಬಗ್ಗೆ ಆಕರ್ಷಿತರಾಗುವಂತೆ ಮಾಡಿರಬಹುದು.

ಈ ರೀತಿಯಾಗಿ ಪ್ರಕೃತಿಯ ಬಗ್ಗೆ ಆಕರ್ಷಿತರಾದಂತಹ ತೇಜಸ್ವಿಯವರ ಸಾಹಿತ್ಯದಲ್ಲೂ ಈ ಪ್ರಕೃತಿಯೆಂಬುದು ಹಿನ್ನೆಲೆಯಾಗಿ ತನ್ನ ಕಾರ್ಯ ನಿರ್ವಹಿಸಿದೆ, ತೇಜಸ್ವಿಯವರು ಪ್ರಕೃತಿ ಬಗ್ಗೆ ಹೊಂದಿದ್ದ ನಿಲುವು, ದೃಷ್ಟಿಕೋನಗಳು ವಿಭಿನ್ನವಾದವು.

ಪ್ರಕೃತಿಯಲ್ಲಿನ ವಿಸ್ಮಯಗಳಿಗೆ ಕುವೆಂಪುರವರು ಆಧ್ಯಾತ್ಮಿಕತೆಯ ಅತ್ಯಂತಿಕ ಸ್ಥಿತಿ ತಲುಪಿದರೆ, ತೇಜಸ್ವಿಯವರು 'ವಿಸ್ಮಯದ' ಮತ್ತು 'ಶೋಧನೆಯ' ಅತ್ಯಂತಿಕ ಸ್ಥಿತಿಯನ್ನು ತಲುಪುವರು, ಪರಿಸರದ ಬಗ್ಗೆ ಒಂದು ರೀತಿಯಾದಂತಹ ವ್ಯಾಮೋಹವನ್ನು ಹೊಂದಿದ್ದಂತಹ ತೇಜಸ್ವಿಯವರು ಹೇಳುತ್ತಿದ್ದ ಮಾತುಗಳು ವಿಶಿಷ್ಟವಾದುವು.

''ಕುವೆಂಪುರವರ ತಾರುಣ್ಯದಲ್ಲಿ ಕಾಡಿನ ಮತ್ತು ಬೇಟೆಯ ರೋಮಾಂಚಕ ಅನುಭವಗಳನ್ನು ಕೇಳಿ ಪ್ರಭಾವಿತನಾದ ನಾನು ನಮ್ಮ ತಂದೆ ಏಕಾದರೂ ಮೈಸೂರಿಗೆ ಪಾಠ ಕೇಳಲು ಮಲೆನಾಡನ್ನು ತೊರೆದು ಬಂದರೋ ಎಂದು ವ್ಯಥೆ ಪಡುತ್ತಿದ್ದೆ'' ಎಂದು ತೇಜಸ್ವಿಯವರು ಅಣ್ಣನ ನೆನಪು ಕೃತಿಯಲ್ಲಿ ಹೇಳಿರುವುದು, ತೇಜಸ್ವಿ ಮಲೆನಾಡಿನ ಪರಿಸರದ ಬಗ್ಗೆ ಹೊಂದಿದ್ದ ಒಲವು ವ್ಯಕ್ತವಾಗುತ್ತದೆ.

ಪ್ರಕೃತಿ-ಪರಿಸರವನ್ನು ಸಹಜವಾಗಿ ಪ್ರೀತಿಸಬೇಕೇ ಹೊರತು ಭವಿಷ್ಯದ ಬಗ್ಗೆ ಇರುವ ಭಯದಿಂದಲ್ಲ ಎಂದು ತೇಜಸ್ವಿ ವ್ಯಾಖ್ಯಾನಿಸಿದ್ದಾರೆ. ಗಾಂಧೀಜಿಯವರು ಹೇಳುವಂತೆ ಪ್ರಕೃತಿ ಸಂಪತ್ತು ನಮಗೆ ಹಿರಿಯರಿಂದ ಬಂದ ಉಡುಗೊರೆಯಲ್ಲ. ನಾವು ಮುಂದಿನ ಪೀಳಿಗೆಗೆ ತೀರಿಸಬೇಕಾದ ಋಣ ಎಂಬುದು ಅಕ್ಷರಶಃ ಸತ್ಯವಾದ ನುಡಿ.

ಪ್ರಕೃತಿಯ ಬಗ್ಗೆ ಭವಿಷ್ಯದ ಬಗ್ಗೆ ಇರುವ ಭಯದಿಂದ ಮೂಡುವ ಪ್ರೀತಿಯನ್ನು ತೇಜಸ್ವಿ ಒಪ್ಪುವುದಿಲ್ಲ. 'ಮೂಢನಂಬಿಕೆ ಅತಿ ರಹಸ್ಯಗಳ ಹಿನ್ನೆಲೆಯಲ್ಲಿ ಎಂಗ್ಟ, ಮಾರನಂತವರು ರೂಪಿಸಿಕೊಂಡ ನಿಲುವನ್ನು ತೇಜಸ್ವಿ ಒಪ್ಪುವುದಿಲ್ಲ. ಬದಲಾಗಿ ಪ್ರಕೃತಿ ಪ್ರಾಣಿಗಳ ಬಗ್ಗೆ ವಸ್ತುನಿಷ್ಟ ಪ್ರೀತಿಯನ್ನು ಅವರು ಪ್ರತಿಪಾದಿಸುತ್ತಾರೆ. ಅಂತಹ ವಸ್ತುನಿಷ್ಟ ಪ್ರೀತಿಗೆ ಮಾತ್ರ ಮನುಷ್ಯನ ಆರೋಗ್ಯವನ್ನು, ಪ್ರಕೃತಿಯ ಸಮತೋಲನವನ್ನು, ಪ್ರಾಣಿಗಳ ವೈವಿಧ್ಯಮಯ ಜೀವನ ಶೈಲಿಯನ್ನು ಉಳಿಸಿಕೊಳ್ಳಲು ಸಾಧ್ಯ ಎಂಬುದು ಈ ದುರಂತ ಕತೆಗಳ ಆಶಯ. ಇಂತಹ ವಸ್ತುನಿಷ್ಟ ಪ್ರೀತಿಯನ್ನು ಬೆಳೆಸಿಕೊಳ್ಳಲು ಟ್ರಕ್ಕಿಂಗ್‌ಗೆ ಹೋಗಬೇಕಾಗಿಲ್ಲ. ಮಲೆನಾಡಿನವರು ಆಗಬೇಕಾಗಿಲ್ಲ ತೇಜಸ್ವಿ ಬಹು ಮಾರ್ಮಿಕವಾಗಿ ಹೇಳಿರುವ ಹಾಗೆ ವಸ್ತುನಿಷ್ಟ ಪ್ರೀತಿಗೆ ಮಾತ್ರ ನಮ್ಮನ್ನು ವಿಶ್ವ ಸಮಾಜದೊಡನೆ ಬೆಸೆಯುವ ಶಕ್ತಿ ಇದೆ. ಆದರೆ ಅಂತಹ ವಸ್ತುನಿಷ್ಟ ಪ್ರೀತಿಯನ್ನು ಸಂಪಾದಿಸಿಕೊಳ್ಳಲು ಭೂಕುಸಿತಗಳ ಕತೆ ಬೇಕಾಗಿಲ್ಲ. ನರಭಕ್ಷಕನ ಕತೆಯೂ ಬೇಕಾಗಿಲ್ಲ. ನಮ್ಮ ಮನೆಯ ಸುತ್ತಮುತ್ತಲಲ್ಲೇ ಇರುವ ಬಿಲಗಳಿಂದ ಇಲಿಗಳು ಕಲ್ಲುಗಳನ್ನು ಎತ್ತಿ ಸಾಗಿಸುವ ಕೆಲಸದ ಬಗ್ಗೆ ಕುತೂಹಲ ಮೂಡಿದರೆ ಸಾಕು. ಅಲ್ಲಿಂದಲೇ ವಸ್ತುನಿಷ್ಟ ಪ್ರೀತಿ ಸಂಪಾದಿಸಿಕೊಳ್ಳಲು ಬೇಕಾದ ವಿವರಗಳ, ಶೈಲಿಗಳ ಕುತೂಹಲ ಪ್ರಾರಂಭವಾಗುತ್ತದೆ. ತೇಜಸ್ವಿಯವರಿಗೆ ಕೂಡ ಇಂತಹ ಘಟನೆಗಳಿಂದಲೇ ಅಂದರೆ ನಮ್ಮ ಬದುಕಿನ ಸುತ್ತಮುತ್ತಲ ವಿವರಗಳು, ಘಟನೆಗಳಿಂದಲೇ ಪ್ರಕೃತಿ ಪ್ರೇಮದ ರಹಸ್ಯದ ಕುತೂಹಲದ ಪಾಠ ಸಿಕ್ಕಿರುವುದು''(ತೇಜಸ್ವಿ ಲೋಕ, ಪುಟ-೭೫)

ತೇಜಸ್ವಿರವರು ಹೇಳುವಂತೆ ಪ್ರಕೃತಿಯ ಬಗ್ಗೆ ವಿಸ್ಮಯವನ್ನು ಬೆಳೆಸಿಕೊಳ್ಳುವುದರ ಮುಖಾಂತರ ಸುತ್ತಮುತ್ತಲಿನ ಘಟನೆಗಳನ್ನು ಕಣ್ತೆರೆದು ನೋಡುವ ದರ್ಶನಪ್ರಜ್ಞೆಯನ್ನು ರೂಢಿಸಿಕೊಂಡಾಗ ವಸ್ತುನಿಷ್ಟ ಪ್ರೀತಿಯು ಮೂಡುತ್ತದೆ. ವಸ್ತುನಿಷ್ಟ ಪ್ರೀತಿಯಿಂದ ಮನುಷ್ಯನ ಆರೋಗ್ಯವನ್ನು ಪ್ರಕೃತಿಯ ಸಮತೋಲನವನ್ನು, ಪ್ರಾಣಿಗಳ ವೈವಿಧ್ಯಮಯ ಜೀವನ ಶೈಲಿಯನ್ನು ಉಳಿಸಿಕೊಳ್ಳಲು ಸಾಧ್ಯವಾಗುತ್ತದೆ ಎಂದು ತೇಜಸ್ವಿ ಪ್ರತಿಪಾದಿಸಿದ್ದಾರೆ. ತೇಜಸ್ವಿರವರು ಸಹ ವಸ್ತುನಿಷ್ಟ ಪ್ರೀತಿಯನ್ನು ಬೆಳೆಸಿಕೊಂಡಿದ್ದರಿಂದಲೇ ಚೀಂಕ್ರ ಮೇಸ್ತ್ರಿಯನ್ನು ಅರಿಸ್ಟಾಟಲ್‌ನೊಂದಿಗೆ ಬೆಸೆಯಲು ಸಾಧ್ಯವಾದದ್ದು ಮತ್ತು ಮಂದಣ್ಣ ಹಾಗೂ ಕರ್ವಾಲೋ ಜೊತೆಯಲ್ಲೇ ಸಾಗುವುದಕ್ಕೆ ಅವಕಾಶ ದೊರೆತದ್ದು, ಆದ್ದರಿಂದ ಪ್ರಕೃತಿಯಲ್ಲಿರುವ ವಿಸ್ಮಯಗಳನ್ನು ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸಿದಾಗ ವಿಶಿಷ್ಟ

ದರ್ಶನ ಪ್ರಾಪ್ತವಾಗುತ್ತದೆ ಮತ್ತು ಅದೊಂದು ನವನವೀನ ಅನುಭವಗಳ ಬುತ್ತಿಯನ್ನು ಉಣಬಡಿಸುತ್ತದೆ. ಇಂತಹ ಸೂಕ್ಷ್ಮ ಪ್ರಜ್ಞೆಯನ್ನು ವಸ್ತುನಿಷ್ಟ ಪ್ರೀತಿಯನ್ನು ಬೆಳೆಸಿಕೊಳ್ಳದೆ ಇದ್ದರೆ ನಮ್ಮ ಎದುರಿಗೆ 'ಹಾರುವ ಓತಿ' ಬಂದು ನಿಂತರೂ ಅದರ ಕಡೆಗೆ ಗಮನ ಹರಿಸುವಂತಹ ಸಾಧ್ಯತೆ ಇರುವುದಿಲ್ಲ. ಪ್ರಕೃತಿಯ ಸೌಂದರ್ಯದ ಮುಂದೆ ಶಿಶು ಸಹಜ ಕುತೂಹಲ ಅಪ್ಪಟ ಮುಗ್ಧತೆಗಳು ತೇಜಸ್ವಿರವರನ್ನು ಒಬ್ಬ 'ಸಮಕಾಲೀನ' ಲೇಖಕನನ್ನಾಗಿ ರೂಪಿಸಿವೆ ಎಂದರೆ ತಪ್ಪಾಗಲಾರದು.

ತೇಜಸ್ವಿರವರು ಪ್ರಕೃತಿಯ ಬಗ್ಗೆ ವಹಿಸುವ ಕಾಳಜಿ ಪರವಾದ ಧೋರಣೆಯನ್ನು ಜುಗಾರಿಕ್ರಾಸ್ ಕಾದಂಬರಿಯ ಮುನ್ನುಡಿಯಲ್ಲಿ ನೋಡಬಹುದು.

'ಕುವೆಂಪುರವರ 'ಕಾನೂರು ಹೆಗ್ಗಡಿತಿ', ಕಾರಂತರ 'ಮರಳಿ ಮಣ್ಣಿಗೆ' ಕಾಲದ ಸಹ್ಯಾದ್ರಿಯ ಕಾಡುಗಳಿಗೂ ಇವತ್ತಿನ ಪರಿಸ್ಥಿತಿಗೂ ಇರುವ ಅಜಗಜಾಂತರ ವ್ಯತ್ಯಾಸಕ್ಕೆ ಈ ಕಾದಂಬರಿಯೇ ಉದಾಹರಣೆ. ಕಾಡುಗಳು ಇವತ್ತು ತೆರೆದಿಟ್ಟ ಖಜಾನೆಗಳಾಗಿವೆ. ಈ ಕಾಡುಗಳ ಒಂದೊಂದೇ ಮರ ಎರಡು ಮೂರು ಲಕ್ಷ ಬೆಲೆ ಬಾಳುತ್ತದೆ. ಕಲ್ಲು ಕಳ್ಳರಿಗೆ, ಮರಗಳ್ಳರಿಗೆ, ಗಂಧ ಚಕ್ಕೆ ಕಳ್ಳಸಾಗಾಣಿಕೆ ಮಾಡುವ ಖದೀಮರಿಗೆ ಕಣ್ಣು ಹರಿಸಿದಲ್ಲೆಲ್ಲಾ ಹಣ ರಾಶಿ ಬಿದ್ದಿರುವಂತೆ ಕಾಣುತ್ತದೆ. ದುಡ್ಡು ಈ ರೀತಿ ಕೋಡಿ ಬಿದ್ದಿರುವಲ್ಲೆಲ್ಲಾ ಏನೇನು ರೂಪುಗೊಳ್ಳುತ್ತಿದೆಯೋ ಅದೆಲ್ಲಾ ಸಹ್ಯಾದ್ರಿ ಕಾಡಿನೊಳಗೆ ಶುರುವಾಗಿದೆ. ಕಾಡು ಕಾಳದಂಧೆಗಳ ತವರು ಮನೆಯಾಗಿದೆ. ಕಾಡಿನಿಂದ ಉತ್ಪತ್ತಿಯಾಗುವ ಕಾಳಧನ ನಮ್ಮ ದೇಶದ ಅತ್ಯುನ್ನತ ರಾಜಕೀಯವನ್ನೂ ಸಹ ನಿಯಂತ್ರಿಸುತ್ತದೆ. ಇಲ್ಲಿ ಕಟ್ಟುವ ಅಣೆಕಟ್ಟುಗಳಾಗಲೀ, ಮುಳುಗಡೆಯಾಗುವ ಕಾಡುಗಳಾಗಲೀ, ಕಲ್ಲು ಅದಿರುಗಳನ್ನು ತೆಗೆಯುವುದಾಗಲೀ, ಜನಗಳಿಗಿಂತ ಹೆಚ್ಚಾಗಿ ರಾಜಕಾರಣಿಗಳಿಗೂ ಅಗತ್ಯವಾಗತೊಡಗಿದೆ. ಕಾಳ ವ್ಯವಹಾರಗಳ ವಿಷವೃತ್ತ ಈ ಮಟ್ಟ ತಲುಪಿದ ಮೇಲೆ ಕಾನೂನು ಮತ್ತು ನ್ಯಾಯಾಲಯಗಳು ಇದನ್ನು ಪ್ರತಿರೋಧಿಸಲಾರವು. ಜನ ಸಮಷ್ಠಿಯ ನಿಶ್ಚಯ ಒಂದೇ ರಕ್ಷೆ. ಅನೇಕ ಪರಿಸರ ಆಂದೋಲನಗಳಲ್ಲಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಭಾಗಿಯಾದ ಮೇಲೆ ಈ ಚಿಕ್ಕ ಚಿಕ್ಕ ಗುಂಪುಗಳು ಅನೇಕ ವೇಳೆ ಯಾವುದಕ್ಕೂ ಸಂಬಂಧಿಸಿರದ ಮುಗ್ಧರೂ ಕೂಡ ಎಂತಹ ಪ್ರಾಣಾಪಾಯದ ಅಂಚಿನಲ್ಲಿ ಕಾಲಹಾಕ ಬೇಕಾಗುತ್ತದೆ ಎನ್ನುವುದು ನನ್ನ ಸ್ವಾನುಭವಕ್ಕೆ ಬಂತು.''

ಪ್ರಕೃತಿಯ ಕುರಿತಾದ ಕಾಳಜಿಯಿಂದ ಶುರುವಾದ ಚಿಂತನೆ ಅದನ್ನು ತನ್ನ ಸ್ವಾರ್ಥಕ್ಕಾಗಿ ನಾಶಪಡಿಸುತ್ತಿರುವ ದುಷ್ಟ ಜನರ ಬಗ್ಗೆ ಟೀಕಿಸಿ, ಅಂತ ಖದೀಮರಿಗೆ ಬೆಂಬಲವಾಗಿ ಪ್ರಕೃತಿಯ ಸಂಪತ್ತನ್ನೇ ಲೂಟಿಮಾಡ ಹೊರಟ ಮನುಷ್ಯನ ಆಸೆಬುರುಕತನವನ್ನು ತೇಜಸ್ವಿ ಯಾವುದೇ ಮರ್ಜಿಗೆ ಒಳಗಾಗದೆ ನೇರವಾಗಿ ಟೀಕಿಸುತ್ತಾರೆ.

ಈ ಕಾಳ ದಂಧೆಗಳ ವಿಷವೃತ್ತದ ವಿರುದ್ಧ ಹೋರಾಡಬೇಕಾದರೆ ಜನ ಸಾಮಾನ್ಯರು ಎಚ್ಚರಗೊಳ್ಳಬೇಕು ಎಂದು 'ಸಾಮಾಜಿಕ ಚಿಂತಕರಾಗಿ' ತೇಜಸ್ವಿ ಕಾಣುತ್ತಾರೆ. ಇಂತಹ ಕಾಳದಂಧೆಗಳಿಂದ, ಮುಗ್ಧ ಮನುಷ್ಯರ ಮೇಲೆ ಆಗುವ ಪರಿಣಾಮವನ್ನು 'ಮಾನವ ಕೇಂದ್ರಿತ'ನೆಲೆಯಲ್ಲಿ ಚಿಂತಿಸುತ್ತಾರೆ. ಒಟ್ಟಿನಲ್ಲಿ ಪ್ರಕೃತಿ ಪರಿಸರವೆಂದರೆ ಮರ, ಕಾಡು, ಬೆಟ್ಟ, ಗುಡ್ಡಗಳಷ್ಟೇ ಅಲ್ಲ. ಆ ಪ್ರಕೃತಿಯು ಮನುಷ್ಯನಿಗೆ ಎಷ್ಟು ಅವಶ್ಯಕ, ಅದರ ನಾಶದಿಂದಾಗುವ ಪರಿಣಾಮುಗಳನ್ನು ಅರಿತರೆ ಮುಂದೊಂದು ದಿನ ಉಂಟಾಗುವ ಅನಾಹುತಗಳನ್ನು ತಪ್ಪಿಸಬಹುದು.

ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯ ಪಾತ್ರಗಳಾದ ಗುತ್ತಿ-ತಿಮ್ಮಿ, ಪ್ರಕೃತಿಯನ್ನು ನೋಡಿ ತಮ್ಮನ್ನೇ ಮರೆಯುತ್ತಾರೆ. ಇದು ಕುವೆಂಪುರವರ ಕಾದಂಬರಿಯ ಪಾತ್ರಗಳು ಪ್ರಕೃತಿಯನ್ನು ಆರಾಧಿಸುವ ಗುಣದ ವಿಶೇಷತೆ. ಅದೇ ರೀತಿ ತೇಜಸ್ವಿರವರು ನಾಶವಾಗುತ್ತಿರುವ ಪ್ರಕೃತಿಯ ಬಗ್ಗೆ ಚಿಂತನೆಯನ್ನು ನಡೆಸುವುದು. 'ಶೋಧನಾ' ಗುಣದ ವಿಶೇಷತೆ ಕುವೆಂಪು ಮತ್ತು ಕಾರಂತರ ಕಾದಂಬರಿಯ ಕಾಲದಲ್ಲಿದ್ದ ಪ್ರಕೃತಿಯ ಸ್ವರೂಪಕ್ಕೂ ಮತ್ತು ತೇಜಸ್ವಿರವರ 'ಜುಗಾರಿ ಕ್ರಾಸ್' ಕಾದಂಬರಿಯ ಕಾಲಘಟ್ಟದಲ್ಲಿರುವ ಪ್ರಕೃತಿಯ ಸ್ವರೂಪಕ್ಕೂ ಇರುವ ವ್ಯತ್ಯಾಸ ಎದ್ದು ಕಾಣುವಂತಿದೆ. ಅಂತಹ ವ್ಯತ್ಯಾಸಗಳನ್ನು ಗುರ್ತಿಸುವುದು ಮತ್ತು ಉಂಟಾದ ವ್ಯತ್ಯಾಸದಿಂದ ಆದ ಸಮಸ್ಯೆಗೆ ಪರಿಹಾರವನ್ನು ಸೂಚಿಸುವುದು ತೇಜಸ್ವಿರವರ ವಸ್ತುನಿಷ್ಠ ಪ್ರೀತಿಯನ್ನು ಸೂಚಿಸುತ್ತದೆ. ತೇಜಸ್ವಿರವರ ಕಾದಂಬರಿಗಳು ನಡೆಸುವ ಪರಿಸರದ ಬಗೆಗಿನ ಚಿಂತನೆಗಳು ಬಹು ವಿಶಿಷ್ಟ. ಈ ಕಾದಂಬರಿಗಳು ಪ್ರಕೃತಿ ನಾಶದಿಂದ ಉಂಟಾಗುವ ಅನಾಹುತಗಳನ್ನು ವಿವರಿಸುತ್ತಲೇ ತನ್ನ ಚಿಂತನೆಗಳನ್ನು ಮಂಡಿಸುತ್ತವೆ. ಮಾಯಾಲೋಕ ಕಾದಂಬರಿಯಲ್ಲಿ ಹಕ್ಕಿಪಿಕ್ಕಿಯ ಜನಾಂಗದವರು ಹುಂಡು ಕೋಳಿಗಳನ್ನು ಬೇಟೆಯಾಡಲು ಬಂದಾಗ ಹುಂಡು ಕೋಳಿಗಳೆಂಬ ವಿಶಿಷ್ಟ ಜಾತಿಯ ಪಕ್ಷಿಗಳ ಬಗ್ಗೆ ಹೊಂದಿರುವ ಆಸಕ್ತಿಯಿಂದ ಹಕ್ಕಿ ಪಿಕ್ಕಿ ಜನಾಂಗದವರನ್ನೇ ಅರಣ್ಯಾಧಿಕಾರಿಗಳಿಗೆ ದೂರು ಕೊಟ್ಟು ಜಾಗ ಖಾಲಿಮಾಡಿಸುತ್ತಾರೆ. ಇದರಿಂದ ತಿಳಿಯುವ

ಸಂಗತಿಯೆಂದರೆ ತೇಜಸ್ವಿರವರಿಗಿದ್ದ ಪರಿಸರದ ಕುರಿತಾದ ಕಾಳಜಿ ಎಂಥಹದ್ದು ಎಂಬುದು ಅರ್ಥವಾಗುತ್ತದೆ.

ತೇಜಸ್ವಿರವರು ಸಾಮಾಜಿಕ ಸಮಸ್ಯೆಗಳಿಗೆ ಪರಿಸರದ ಮುಖಾಂತರ ಉತ್ತರವನ್ನು ಕಂಡುಕೊಳ್ಳುವ ಪರಿ ವಿಶಿಷ್ಟವಾದದ್ದು. ಮಾಯಾಲೋಕ ಕಾದಂಬರಿಯಲ್ಲಿ ಗೊಂದಲಗೇರಿಯೆಂಬ ಪಟ್ಟಣದಲ್ಲಿ ಯಾವಾಗಲೂ ಮುಷ್ಕರ, ರಸ್ತೆರೋಕೋ, ಪ್ರತಿಭಟನೆಗಳು ನಡೆಯುತ್ತಲೇ ಇರುತ್ತವೆ. ಇಂತಹ ಸಮಸ್ಯೆಗಳಿಗೆಲ್ಲಾ ತೇಜಸ್ವಿ ಕಾದಂಬರಿ ಮಳೆಯ ಮುಖಾಂತರ ಪರಿಹಾರವನ್ನು ಸೂಚಿಸುವ ವಿಧಾನ ವಿಶಿಷ್ಟವಾದದ್ದು. 'ಮಳೆ ಬಂದರೆ ಯಾರು ಬರ್ತಾರೋ ಮುಷ್ಕರಕ್ಕೆ ? ಮಳೆ ಬರ್ತಿದ್ದ ಹಾಗೆ ನಮ್ಮ ಬೇಸಿಗೆ ನಾಟಕಕ್ಕೆ ತೆರೆಬೀಳ್ತೂಂತ ತಿಳುಕೋ! ನಿನ್ನ ಮೆಣಸಿನ ಮಡಿ! ಹಳ್ಳದ ತಕರಾರು! ಇಕ್ಬಾಲ್ ಸಾಬಿಯ ಪುಕಾರುಗಳು, ಕರೆಂಟಿನವರ ಕಾಟ ಎಲ್ಲ ಒಂದೇ ಏಟಿಗೆ ಕ್ಲೋಸ್ ತೆರೆಬಿತ್ತು ಅಂತ ತಿಳುಕೋ ಮತ್ತೆ ತೆರೆಮೇಲೆ ಎದ್ದಾಗ ರಾಮಾಯಣ ಮುಗಿದು ಭಾರತ ಶುರುವಾಗಿರುತ್ತೆ ಅಂತಾರಲ್ಲ ಹಂಗೆ ಬೇರೇದೆ ನಾಟಕ ಶುರ್‍ವಾಗಿರುತ್ತೆ. ಇವತ್ತು ಏನಾದರೂ ಕೆಲಸ ಇದ್ದರೆ ಕೊಡಿ ಅಂತ ಕೆಲಸದ ಆಳುಗಳು ಅಂಗಲಾಚುತ್ತಿದ್ದಾರಲ್ಲಾ, ನಾಳೆ ತೆರೆ ಎದ್ದಾಗ ನಾನು ಅವರಿಗೆ ಅಂಗಲಾಚಿಕೊಂಡು ತಿರುಗಬೇಕು, ಇಲ್ಲದಿದ್ರೆ ಅಗೇಡಿ ಹಾಕಕ್ಕೆ, ಸಸಿ ನೆಟ್ಟಿಗೆ ಜನ ಇಲ್ಲ. ನಾಳೆ ಚಳುವಳೀನೂ ಇಲ್ಲ, ಮುಷ್ಕರಾನೂ ಇಲ್ಲ, ಕರೆದರೆ ಬರುವವರು ಇರೋದಿಲ್ಲ'' (ಮಾಯಾಲೋಕ-೧.ಪು-೨೩೮ ಪ್ರ.ಪುಸ್ತಕ ಪ್ರಕಾಶನ ಮೊದಲನೆ ಮುದ್ರಣ ೨೦೦೬, ಲೇ. ಕೆ.ಪಿ. ಪೂರ್ಣಚಂದ್ರತೇಜಸ್ವಿ) ಗೊಂದಲಗಳಿಂದ ತುಂಬಿಹೋಗಿದ್ದ ಗೊಂದಲಗೇರಿ ಮಳೆ ಬಿದ್ದ ತಕ್ಷಣ ಪಲ್ಲಟಗೊಳ್ಳುವ ಸಾಮಾಜಿಕ ವ್ಯವಸ್ಥೆ ಎಲ್ಲವನ್ನು ನೋಡಿದರೆ ಸಾಮಾಜಿಕ ಸಮಸ್ಯೆಗಳಿಗೆಲ್ಲ ಪ್ರಕೃತಿಯೇ ಉತ್ತರವನ್ನು ನೀಡುತ್ತದೆ ಎಂದು ಭಾಸವಾಗುತ್ತದೆ. ಚಿದಂಬರ ರಹಸ್ಯ ಕಾದಂಬರಿಯಲ್ಲಿ ಕಾಡಿಗೆ ಬೆಂಕಿ ಬೀಳುವುದು, ನಿಗೂಢ ಮನುಷ್ಯರು ಕಾದಂಬರಿಯಲ್ಲಿ ಉಗ್ರಗಿರಿ ಕುಸಿಯುವುದು, ಕಿರಗೂರಿನ ಗಯ್ಯಾಳಿಗಳು ಕಥೆಯಲ್ಲಿ ಬೀಳುವ ಮರ ಇವೆಲ್ಲ ಸಾಮಾಜಿಕ ಸಮಸ್ಯೆಗಳಿಗೆ, ಮನುಷ್ಯನ ನಡವಳಿಕೆಗಳಿಗೆ ಪ್ರಕೃತಿ ಕೊಡುವ ಉತ್ತರವಿರಬಹುದೇನೋ ಎಂದು ಅನ್ನಿಸುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಸಂಭವಿಸುತ್ತಿರುವ ಪ್ರವಾಹ ಚಂಡ ಮಾರುತ ಇವುಗಳೆಲ್ಲ ಮನುಷ್ಯನಿಗೆ ಪ್ರಕೃತಿ ನೀಡುತ್ತಿರುವ ಎಚ್ಚರಿಕೆ ಇರಬಹುದು, ಇಂತಹ ಪ್ರಾಕೃತಿಕ ವಿಕೋಪಗಳು ಜರುಗಿದರೆ ಮನುಷ್ಯ ಜಗತ್ತೇ ಅಲ್ಲೋಲ ಕಲ್ಲೋಲವಾಗುತ್ತದೆ. ಮನುಷ್ಯನು ಅವಿಷ್ಕಾರಮಾಡಿರುವ ಯಾವ ತಂತ್ರಜ್ಞಾನವೂ ಸಹ ಪ್ರಕೃತಿಯ ಈ ಅಟ್ಟಹಾಸವನ್ನು ತಡೆಯಲು ಸಾಧ್ಯವಿಲ್ಲ.

ಪ್ರಕೃತಿಯ ಮೇಲೆ ನಿರಂತರ ದಬ್ಬಾಳಿಕೆಯನ್ನು ನಡೆಸುತ್ತಿರುವ ಮನುಷ್ಯ ಇದನ್ನು ಅರಿತಿರಬೇಕು. ತೇಜಸ್ವಿರವರ ಪರಿಸರ ಕಾಳಜಿ ಅವರ ಸಾಹಿತ್ಯದಲ್ಲಿ ಸಿಂಹಪಾಲು ಕಂಡುಬಂದಿದೆ. ಅವರ ಪ್ರವಾಸ ಕಥನವಾದ ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್ ಕೃತಿಯಲ್ಲಿ ಕಾಡನ್ನು ಕಡಿದು ಕೃಷಿಗೆ ಯೋಗ್ಯವಾದ ಭೂಮಿಯನ್ನಾಗಿ ಪರಿವರ್ತಿಸುವ ಕ್ರಿಯೆಯನ್ನು ತೇಜಸ್ವಿ ವಿರೋಧಿಸುತ್ತಾರೆ. ಏಕೆಂದರೆ ಅಭಿವೃದ್ಧಿಯ ಹೆಸರಿನಲ್ಲಿ ಅರಣ್ಯ ನಾಶವಾಗುವುದು ತೇಜಸ್ವಿಯವರ ಪರಿಸರ ಕಾಳಜಿಗೆ ವಿರುದ್ಧವಾದದ್ದು. ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ತೇಜಸ್ವಿಯವರ ಕೇಂದ್ರಪ್ರಜ್ಞೆ ಪರಿಸರದ ಪರವಾದ ಚಿಂತನೆಗಳನ್ನು ಒಳಗೊಂಡಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ.

ತೇಜಸ್ವಿ ಕಾದಂಬರಿಗಳ ಪಾತ್ರಗಳು ನಗರದಿಂದ ದೇಸಿಯತೆಯ ಪ್ರತೀಕವಾಗಿರುವ ಹಳ್ಳಿಯ ಕಡೆಗೆ ಚಲಿಸುವ ಕ್ರಮವು ವಿಶಿಷ್ಟವಾದದ್ದು. 'ಜುಗಾರಿಕ್ರಾಸ್' ಕಾದಂಬರಿಯ ಸುರೇಶ ತೋಟವನ್ನು ಖರೀದಿಸಿ, ಮಲೆನಾಡಿಗೆ ಬರುವುದು 'ನಿಗೂಢ ಮನುಷ್ಯರು' ಕಾದಂಬರಿಯಲ್ಲಿ ಜಗನ್ನಾಥ, ರಂಗಪ್ಪ ಅನುಭವಗಳನ್ನು ಅರಸಿಕೊಂಡು ಹಳ್ಳಿಗೆ ಬರುವುದು, ಈ ಅಂಶಗಳನ್ನು ಗಮನಿಸಿದರೆ ನಗರದಿಂದ ಹಳ್ಳಿಯ ಕಡೆಗೆ ಚಲಿಸುವುದು ನಾಡಿನಿಂದ, ಕಾಡಿನ ಕಡೆಗೆ ಚಲಿಸುವ ಪ್ರಕ್ರಿಯೆಯಿಂದ 'ಮರಳಿ ಮಣ್ಣಿಗೆ' ಎಂಬ ಪರಿಕಲ್ಪನೆ ನೆನಪಾಗುತ್ತದೆ. ತೇಜಸ್ವಿ ಕಾದಂಬರಿಗಳು ಪ್ರಕೃತಿಯ ಮೂಲಕವೇ ಸಾಮಾಜಿಕ ಜೀವನವನ್ನು ತೆರೆದಿಡುತ್ತವೆ. ಮಳೆಗಾಲದ ನಾಲ್ಕು ತಿಂಗಳು ಮಾತ್ರ ಕೆಸರೂರು ಎನಿಸಿಕೊಂಡರು ಈ ಊರು ಸದಾ ತಣ್ಣಗಿರುವ ನಿತ್ಯಹರಿದ್ವರ್ಣದ ಕಾಡಿನಿಂದ ಸುತ್ತುವರಿದಿದ್ದು ಇದು ಒಂದು ಅಪ್ಸರ ಲೋಕ ! ಗಿರಿತಪ್ಪಲಿನ ಈ ಪುಟ್ಟ ಊರು ಕರ್ನಾಟಕದ ಸ್ವಿಡ್ಜರ್‌ಲ್ಯಾಂಡ್ ಹೀಗೆ ಮಾಯಾನಗರಿಯಂತಿದ್ದ ಕೆಸರೂರು ಈಗ ಅವನತಿಯ ಹಾದಿ ಹಿಡಿದಿದೆ. ಊರಿನ ಜೀವನಾಧಾರವಾದ ಏಲಕ್ಕಿ ಉತ್ಪಾದನೆ ಇಳಿಮುಖವಾಗಿದೆ. ಯಾವುದೋ ವೈರಸ್ ಕಾಯಿಲೆಯಿಂದ ಗಿಡಗಳೇ ನಾಶವಾಗುತ್ತವೆ, ಇದಕ್ಕೆ ಕಾರಣ ನಿಸರ್ಗದ ಮೇಲೆ ಮಾನವ ನಡೆಸುವ ದೌರ್ಜನ್ಯ.

ನಿಸರ್ಗದ ಮೇಲೆ ಮನುಷ್ಯನ ದೌರ್ಜನ್ಯದಿಂದ ಒಂದು ಊರು ಅವನತಿಯ ಹಾದಿಯನ್ನು ಹಿಡಿಯಬೇಕಾದರೆ ಮನುಷ್ಯನ ಕ್ರೌರ್ಯ ಎಷ್ಟರ ಮಟ್ಟಿಗೆ ಇರಬಹುದೆಂದು ಊಹಿಸಬಹುದಾಗಿದೆ. ಮನುಷ್ಯನು ಹೀಗೆಯೇ ತನ್ನ ಸ್ವಾರ್ಥಕ್ಕಾಗಿ ಪ್ರಕೃತಿಯನ್ನು ನಾಶಪಡಿಸುತ್ತಾ ಬಂದರೆ ಮುಂದೊಂದು ದಿನ ಪ್ರಕೃತಿಯ ಉಗ್ರಮುನಿಸು ಮನುಕುಲವನ್ನೇ

ನಾಶಪಡಿಸುವುದರಲ್ಲಿ ಎರಡು ಮಾತಿಲ್ಲ. ತೇಜಸ್ವಿ ಪ್ರಕೃತಿಯ ಸೌಮ್ಯ ಮುಖವನ್ನು ತಿಳಿದಂತೆ ರೌದ್ರವಾದ ಮುಖವನ್ನೂ ಸಹ ಕಂಡಿದ್ದಾರೆ.

ಪರಿಸರದ ಮತ್ತೊಂದು ಮುಖವಾದ ರೌದ್ರತೆಯನ್ನು ಮಾಯಾಲೋಕ ಕಾದಂಬರಿಯಲ್ಲಿ ಮಂಡಿಸಿದ್ದಾರೆ. ಮಲೆನಾಡು ಎಂದರೆ ನೆನಪಾಗುವುದು ಸುಂದರವಾದ ವನ ಪ್ರದೇಶ, ಮನೋಹರವಾದ ಪರ್ವತಗಳು, ಬಾಗಿ ಬಳುಕಿ, ಹರಿಯುವ ಝುರಿಗಳು, ಕಣ್ಣು ಹಾಯಿಸಿದಷ್ಟು ದೂರಕ್ಕೆ ಕಣ್ತುಂಬುವ ಹಸಿರು ವನರಾಶಿ, ಇವೆಲ್ಲಾ ಪ್ರಕೃತಿಯ ಸೌಮ್ಯ ಮುಖಗಳು, ಆದರೆ ಇದೇ ಪ್ರಕೃತಿಗೆ ರೌದ್ರ ಮುಖವೊಂದಿದೆ ಅದನ್ನು ತೇಜಸ್ವಿ ಹೀಗೆ ವರ್ಣಿಸುತ್ತಾರೆ.

'ಈ ಮಲೆನಾಡಿನಲ್ಲಿ ಎಲ್ಲವೂ ಅತಿರೇಕವೇ ! ಮಳೆಗಾಲದಲ್ಲಿ ದೋ ದೋ ಎಂದು ಹಗಲು ರಾತ್ರಿಗಳೆನ್ನದೆ ಉರವಣಿಸಿ ಸುರಿಯುವ ಮಳೆ, ಕಾಲಿಟ್ಟಲ್ಲಿ ಕೆಸರು, ಕಾಲು ಸಂಧಿಗಳಲ್ಲೆಲ್ಲಾ ಕೆಸರುಹುಣ್ಣು, ಕಿವಿಯ ಮೇಲೆ ಗರಗಸ ಆಡಿಸಿದಂತೆ ಬಂದು ಅಪ್ಪಳಿಸುವ ಜೀರುಂಡೆಗಳ ನಿರಂತರ ಜೀರ್ದನಿ, ಒಂದು ಸಾರಿ ಈ ಮಳೆ ನಿಂತರೆ ಸಾಕಪ್ಪ ಎನ್ನಿಸದೇ ಮಳೆಗಾಲ ವಿದಾಯ ಹೇಳುವುದಿಲ್ಲ. ಅದು ನಿಲ್ಲುತ್ತಿದ್ದಂತೆಯೇ ತಂಗಾಳಿ ಮೆಲ್ಲಗೆ ಮೋಹಿನಿಯಂತೆ ಬಂದದ್ದು ಒಂದೆರಡು ದಿನದೊಳಗೆ ಕೊರೆಯುವ ಚಳಿಯಾಗುತ್ತದೆ. ಬಚ್ಚಲು ಹಂಡೆಯ ಪಕ್ಕ ಬೆಂಕಿ ಕಾಯಿಸುತ್ತಾ ಕುಳಿತವರಿಗೆ ಮೇಲೇಳುವ ಮನಸ್ಸೇ ಬರುವುದಿಲ್ಲ. ನೀರು ಮುಟ್ಟಿದರೆ ಮಂಜುಗಡ್ಡೆ ಮುಟ್ಟಿದಂತಾಗಿ ಎಲ್ಲರೂ ಕಾಟಾಚಾರಕ್ಕೆ ಬೆಳಿಗ್ಗೆ ಎದ್ದು ಮುಖ ತೊಳೆಯುತ್ತಾರೆ. ಹಾಲಿಗೆ ಎಷ್ಟು ಮಜ್ಜಿಗೆ ಸುರಿದರೂ, ಹೆಪ್ಪುಹಾಕಿದರೂ ಮೊಸರೇ ಆಗುವುದಿಲ್ಲ. ರಾತ್ರಿ ಮಲಗಿದರೆ ಹಾಸಿಗೆ ಸಹ ತಣ್ಣಗೆ ಕೊರೆಯುತ್ತದೆ. ಮೈಶಾಖಕ್ಕೆ ಹಾಸಿಗೆ ಕೊಂಚವಾದರೂ ಬೆಚ್ಚಗಾಗುವುದಕ್ಕೆ ಘಂಟೆಗಟ್ಟಲೇ ಅಲ್ಲಾಡದೆ ಸತ್ತ ಹೆಣದ ಹಾಗೆ ಹಾಸಿಗೆ ಮೇಲೆ ಬಿದ್ದುಕೊಂಡಿರಬೇಕು. ಮೈಯೆಲ್ಲಾ ಹುರುಪೆ ಎದ್ದು, ಕಾಲು ತುಟಿಯೆಲ್ಲಾ ಬಿರುಕು ಬಿಟ್ಟು ರಕ್ತ ಒಸರುತ್ತದೆ. ಚಳಿಗಾಲ ಒಂದು ಸಾರಿ ತೊಲಗಿದರೆ ಸಾಕಪ್ಪ ಎನ್ನಿಸುವವರೆಗೂ ಚಳಿ ಗಡ ಗಡ ನಡುಗಿಸುತ್ತದೆ. ಜನ ಶಿವರಾತ್ರಿ ಕಳೆದು ಚಳಿ ನಿರ್ಗಮಿಸುವುದನ್ನೇ ಕಾಯುತ್ತಾರೆ. ಮಾರ್ಚ್ ತಿಂಗಳು ಮುಗಿಯುತ್ತಾ ಬಂದರೂ ಮಳೆಯ ಸುಳಿವೇ ಇಲ್ಲಾ. ಬೆಳಗಿನ ಹೊತ್ತು ಸೂರ್ಯೋದಯಕ್ಕೆ ಮುನ್ನ ಮಾತ್ರ ವಾತಾವರಣ ತಂಪಾಗಿರುತ್ತದೆ. ಮಂಜು ಒಂದೊಂದು ದಿನ ದಟ್ಟವಾಗಿ ಬೀಳುತ್ತದೆ. ತೋಟಗಳಲ್ಲಿ ಎಲೆಗಳ ಮೇಲೆ ಕುಳಿತ ಮಂಜಿನ ಹನಿಗಳು ಜಾರಿ ತರಗೆಲೆಗಳ ಮೇಲೆ ಬೀಳುವ ಸದ್ದು ತಟ ತಟ ಎಂದು ಶಬ್ಧ ಮಾಡುತ್ತಾ ಮಳೆಯ ಭ್ರಮೆ ಹುಟ್ಟಿಸುತ್ತಿತ್ತು.

ಸೂರ್ಯ ಮೇಲೆದ್ದು ಬಿಸಿಲಿನ ಪ್ರಖರ ಕಿರಣಗಳು ತಾಗಿದ ಕೂಡಲೇ ಮಂಜು ಮಾಯವಾಗಿ, ತರಗೆಲೆಗಳ ಮೇಲೆ ಬಿದ್ದಿದ್ದ ನೀರ ಪಸೆಯಲ್ಲಾ ಕೆಲವೇ ಕ್ಷಣದೊಳಗೆ ಅಂತರ್ದಾನವಾಗಿ, ಉರಿಬಿಸಿಲು ಬೆಂಕಿ ಬಿದ್ದ ಹಾಗೆ ಮಲೆನಾಡಿನ ದಟ್ಟ ಕಾಡುಗಳ ಮೇಲೆ ಪಸರಿಸುತ್ತಿತ್ತು.

ಸಂಜೆಯಾಗುತ್ತಿದ್ದಂತೆಯೇ ಮಧ್ಯಾಹ್ನದ ಬಿಸಿಲಲ್ಲಿ ಬಿಸಿ ಬಾಣಲೆಯಂತೆ ಕಾಯ್ದ ಕಾಡುಗಳಿಗೆ ಹೊಗೆಯ ಮುಸುಕು ಕವಿಯುತ್ತದೆ. ಒಣಗಿ ನಿಂತ ಹುಲ್ಲು ಹಳು ಮೊದಲಾದವಕ್ಕೆಲ್ಲಾ ಬೆಂಕಿ ಕೊಟ್ಟು ಸುಟ್ಟರೆ ಬೇಗ ಹೊಸ ಚಿಗುರು ಬಂದು ದನಗಳಿಗೆ ಮೇವು ದೊರೆಯುತ್ತದೆ ಎಂದು ಜನಗಳೇ ಬೆಂಕಿ ಕೊಟ್ಟು ಕಾಳ್ಗಿಚ್ಚು ಏಳಿಸುತ್ತಿದ್ದರು. ರಾತ್ರಿಯಾದರೆ ದೂರದ ಗುಡ್ಡಗಳಲ್ಲಿ ಕಾಳ್ಗಿಚ್ಚು ಕೆಂಪು ಸೀಮೆಸುಣ್ಣದಲ್ಲಿ ಎಳೆದ ಗೀರಿನಂತೆ ಸಾಲಾಗಿ ಉರಿಯುವುದು ಕಾಣುತ್ತಿತ್ತು. ಇದು ಜನಗಳು ಹಿಂದಿನಿಂದ ಅನುಸರಿಸಿಕೊಂಡು ಬಂದ ಪದ್ಧತಿಯಾದರೂ ಸಹ್ಯಾದ್ರಿ ಕಾಡುಗಳಿಗೆ ಯುಪೆಟೋರಿಯಂ ಕಳೆ ಕಾಲಿಟ್ಟ ಮೇಲೆ ಕಾಳ್ಗಿಚ್ಚಿನಿಂದಾಗುವ ಅನಾಹುತದ ಪ್ರಮಾಣ ಹೆಚ್ಚುತ್ತಾ ಬಂದಿದ್ದು ಯಾರ ಗಮನಕ್ಕೆ ಬಂದಿರಲಿಲ್ಲ. ಯುಪೆಟೋರಿಯಂ ಕಳೆ ಮರಕ್ಕೆ ಸುತ್ತಿಕೊಂಡು ಬಳ್ಳಿಯಂತೆ ಎತ್ತರಕ್ಕೆ ಬೆಳೆಯುತ್ತದೆ. ಹಿಂದೆಲ್ಲಾ ಕಾಡಿಗೆ ಬೆಂಕಿ ಬಿದ್ದಾಗ ಕೇವಲ ನೆಲಮಟ್ಟದಲ್ಲಿ ಹುಲ್ಲು ಸುಡುತ್ತಿದ್ದುದರಿಂದ ದೊಡ್ಡ ದೊಡ್ಡ ಎತ್ತರದ ಮರಗಳಿಗೆ ಹೆಚ್ಚು ಘಾಸಿಯಾಗುತ್ತಿರಲಿಲ್ಲ. ಆದರೆ ಈಗ ಮರತಬ್ಬಿ ಹಿಡಿದಿರುವ ಯುಪೆಟೋರಿಯಂ ಜ್ವಾಲೆ ಕಾರುತ್ತಾ ಉರಿದರೆ, ದೊಡ್ಡ ಮರಗಳ ತೊಗಟೆ ಬಹಳ ಎತ್ತರದವರೆಗೂ ಸುಟ್ಟು ಸಾಯುತ್ತಿದ್ದವು. ಕಾಡು ಪ್ರಾಣಿಗಳಿಗಂತೂ ಕಾಳ್ಗಿಚ್ಚು ಬಿದ್ದರೆ ಯುಪೆಟೋರಿಯಂ ಯಮಪಾಶವೇ ಸರಿ. ಯುಪೆಟೋರಿಯಂ ಬೆಳೆದಿದ್ದ ಕಾಡಿಗೆ ಬೆಂಕಿ ಬಿದ್ದರೆ ಕಾಳ್ಗಿಚ್ಚು ಅಕ್ಷರಶಃ ನಾಗರ ಹಾವಿನಂತೆ ಬುಸುಗುಡುತ್ತಾ ವೇಗವಾಗಿ ವ್ಯಾಪಿಸುವುದನ್ನು ನೋಡಿದ್ದೇನೆ. ಯುಪೆಟೋರಿಯಂ ಜಿಗ್ಗಿನಲ್ಲಿ ತೊಡಕಿಕೊಂಡ ಜಿಂಕೆ, ಕಾಡುಕೋಣ ಇತ್ಯಾದಿ, ಮಿಂಚಿನ ಓಟಗಾರರೂ ಸಹ ಬೆಂಕಿಗಿಂತ ವೇಗವಾಗಿ ಓಡಿ ತಪ್ಪಿಸಿಕೊಳ್ಳಲಾರದೆ ಸುಟ್ಟು ಸತ್ತಿರುವ ಬೇಕಾದಷ್ಟು ಘಟನೆಗಳಿವೆ. (ಮಾಯಾಲೋಕ-೧, ಪುಟ-೬೧, ೬೨, ೬೩ ಪುಸ್ತಕ ಪ್ರಕಾಶನ, ಮೊದಲನೆ ಮುದ್ರಣ, ಲೇ. ಕೆ.ಪಿ. ಪೂರ್ಣಚಂದ್ರತೇಜಸ್ವಿ).

ಮಲೆನಾಡಿನಲ್ಲಿ ಮಳೆಗಾಲ, ಚಳಿಗಾಲ, ಬೇಸಿಗೆಕಾಲ ಈ ಮೂರು ಕಾಲಗಳಲ್ಲಿಯೂ ವಿಭಿನ್ನವಾಗಿ ಪ್ರಕೃತಿಯು ವರ್ತಿಸುತ್ತವೆ. ಈ ರೀತಿ ವರ್ತಿಸುವುದನ್ನು ವರ್ಣಿಸುವುದನ್ನು ವರ್ಣಿಸಿರುವುದು ತೇಜಸ್ವಿರವರ ಸೂಕ್ಷ್ಮ ಪ್ರಜ್ಞೆಗೆ ಹಿಡಿದ ಕೈಗನ್ನಡಿಯಾಗಿದೆ. ಜನ

ಸಾಮಾನ್ಯರಿಗೆ ಯುಪೆಟೋರಿಯಂ ಎಂಬ ಕಳೆ ಕಾಳ್ಗಿಚ್ಚಿನ ಸಂದರ್ಭದಲ್ಲಿ ಕಾಡನ್ನು ನಾಶಮಾಡುವ ಬಗೆಯನ್ನು ತೇಜಸ್ವಿ ಗುರ್ತಿಸುವುದು ಅವರ ದರ್ಶನ ಪ್ರಜ್ಞೆಯ ಸಂಕೇತವಾಗಿದೆ.

ಮಳೆಗಾಲ, ಚಳಿಗಾಲ ಮತ್ತು ಬೇಸಿಗೆ ಕಾಲ ಈ ಮೂರು ಕಾಲಮಾನಗಳಲ್ಲಿ ಮಾನವ ಪ್ರಕೃತಿಯ ಈ ವೈಚಿತ್ರದಿಂದ ತಪ್ಪಿಸಿಕೊಳ್ಳಲು ನಾನಾ ರೀತಿ ಹೆಣಗಾಡುವುದನ್ನು ಕಾಣಬಹುದಾಗಿದೆ. ಇದರಿಂದ ಗೋಚರವಾಗುವ ಸಂಗತಿಯೆಂದರೆ ಪ್ರಕೃತಿಯ ವರ್ತನೆಗೆ ಮಾನವನು ಯಾವ ರೀತಿಯಿಂದಲೂ ಪ್ರತಿರೋಧವನ್ನು ಒಡ್ಡಲಾರ ಎಂಬ ಸತ್ಯ ವೇದ್ಯವಾಗುತ್ತದೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ಪ್ರಸ್ತಾಪಿಸಿರುವ ಲಂಟಾನದ ಸ್ವರೂಪ ಯುಪೆಟೋರಿಯಂ ಅನ್ನು ಹೋಲುತ್ತದೆ. ಯುಪೆಟೋರಿಯಂ ಯಾವ ರೀತಿ ಕಾಡನ್ನು ನಾಶಪಡಿಸುತ್ತದೆಯೋ ಅದೇ ರೀತಿಯಾಗಿ ಲಂಟಾನವು ಸಹ ತನ್ನ ಉಗ್ರಸ್ವರೂಪದಿಂದ ಕಾಡಿನ ಅವನತಿಗೆ ಕಾರಣವಾಗುತ್ತದೆ. ಲಂಟಾನ ಎಂಬುದು ಸಾಂಪ್ರದಾಯಿಕ ಸಮಾಜದ ಪ್ರತಿಬಿಂಬ ಕೂಡ.

ಪ್ರಕೃತಿಯ ಅಂಶಗಳೇ ತೇಜಸ್ವಿರವರ ಕಾದಂಬರಿಗಳಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ನಿಗೂಢ ಮನುಷ್ಯರು ಕಾದಂಬರಿಯ ಉಗ್ರಗಿರಿಯ ಕುಸಿತ, ಮಾಯಾಲೋಕ ಕಾದಂಬರಿಯಲ್ಲಿ ಬರುವ ಕತ್ತಲಗಿರಿ, ಜುಗಾರಿಕ್ರಾಸ್ ಕಾದಂಬರಿಯಲ್ಲಿ ಬರುವ ದೋಣಿಹೊಳೆ, ಮಾಯಾಲೋಕ ಕಾದಂಬರಿಯಲ್ಲಿರುವ ಜೌಗು ಈ ಅಂಶಗಳು ತೇಜಸ್ವಿ ಕಾದಂಬರಿಗಳಲ್ಲಿ ಮಹತ್ವದ ಪಾತ್ರವನ್ನು ನಿಭಾಯಿಸಿವೆ. ಸಾಮಾಜಿಕ ಜೀವನದ ಪಲ್ಲಟಕ್ಕೆ ಜೀವನದ ಹಲವಾರು ನಿಗೂಢ ರಹಸ್ಯಗಳಿಗೆ ಉತ್ತರವನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ಈ ಅಂಶಗಳು ಪ್ರಮುಖವೆನಿಸಿವೆ. ದೋಣಿಹೊಳೆಯಲ್ಲಿ ಮೀನು ಹಿಡಿಯ ಹೊರಟ ಸುರೇಶ, ಉಗ್ರಗಿರಿಯ ಕುಸಿತದಿಂದ ಭಯಗೊಳ್ಳುವ ಗೋಪಾಲಯ್ಯ, ರಂಗಪ್ಪ, ಜಗನ್ನಾಥ, ಈ ಪಾತ್ರಗಳು ಪ್ರಕೃತಿಯ ವರ್ತನೆಯ ಹಿನ್ನೆಲೆಯಲ್ಲಿ ತಮ್ಮನ್ನೇ ಕಂಡುಕೊಳ್ಳುವ ಕಾರ್ಯಕ್ಕೆ ತೊಡಗುತ್ತಾರೆ. ಪ್ರಕೃತಿಯಲ್ಲಿನ ಭೀಕರತೆಯ ಬಗ್ಗೆ ನಿಗೂಢ ಮನುಷ್ಯರು ಕಾದಂಬರಿಯಲ್ಲಿ ಮತ್ತಷ್ಟು ಉಲ್ಲೇಖಗಳಿವೆ. 'ಈ ನಡುವೆ ಬಿರುಸಾಗಿ ಬೀಸುತ್ತಿದ್ದ ಗಾಳಿ ಭಯಂಕರ ವೇಗವನ್ನು ಮುಟ್ಟಿದ್ದುದರಿಂದ ಮಳೆಯ ಇರಿಚಲು ಮುಖಕ್ಕೆ ಗುಂಡು ಸೂಜಿಗಳಂತೆ ಚುಚ್ಚತೊಡಗಿದವು. ಗಾಳಿಯ ಬಿರುಸಿಗೆ ಮರಗಳು ನೆಲಮುಟ್ಟುವಂತೆ ಬಗ್ಗಿಬಗ್ಗಿ

ಏಳುತ್ತಿದ್ದವು. ಈ ರೌದ್ರಾವತಾರವನ್ನು ನೋಡಿ ಎಲ್ಲರಿಗೂ ಚಿಂತೆಯಾಯ್ತು.'' (ನಿಗೂಢ ಮನುಷ್ಯರು, ಪುಟ-೧೦೩, ಪುಸ್ತಕ ಪ್ರಕಾಶನ, ನಾಲ್ಕನೆಯ ಮುದ್ರಣ-೨೦೦೦, ಲೇ. ಕೆ.ಪಿ.ಪೂರ್ಣಚಂದ್ರತೇಜಸ್ವಿ)

ಪ್ರಕೃತಿಯ ಅವತಾರಗಳ ಮುಂದೆ ಮನುಷ್ಯರು ಚಿಂತಿಸುವ ಕಾರ್ಯವನ್ನು ಬಿಟ್ಟು ಮತ್ತೇನೂ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ ಎಂಬ ಸತ್ಯ ಮೇಲಿನ ಮಾತುಗಳಿಂದ ವೇದ್ಯವಾಗುತ್ತದೆ. ಪ್ರಕೃತಿಯು ಸಂಕೀರ್ಣವಾಗಿ ಚಕ್ರವ್ಯೂಹದಂತೆ ವ್ಯಕ್ತವಾಗುವ ಪರಿ ವಿಶಿಷ್ಟವಾದುದು.

'ಸೇತುವೆ ಕೊಚ್ಚಿ ಹೋಗಿ ಹೊಳೆ ದಾಟಲಾರದಂತಾದ ಮೇಲೆ ಅನಂತರದ ಪರಿಸ್ಥಿತಿಯ ಸ್ವರೂಪ ತೀವ್ರತೆಗಳೇ ಬದಲಾಗತೊಡಗಿದವು. ಕಡಿದಾದ ಈ ಪರ್ವತ, ಬಿರುಗಾಳಿ, ಬಿರುಮಳೆಗಳೆಲ್ಲಾ ಯಾವುದೋ ಒಂದು ಚಕ್ರವ್ಯೂಹದಂತೆ ಎಲ್ಲರಿಗೂ ಭಾಸವಾಗತೊಡಗಿತ್ತು. (ನಿಗೂಢ ಮನುಷ್ಯರು ಪುಟ-೧೧೯, ಪ್ರ.ಪುಸ್ತಕ ಪ್ರಕಾಶನ, ನಾಲ್ಕನೆಯ ಮುದ್ರಣ -೨೦೦೦, ಲೇ.ಕೆ.ಪಿ.ಪೂರ್ಣಚಂದ್ರತೇಜಸ್ವಿ)

ಪ್ರಕೃತಿಯ ಅಬ್ಬರದ ಮುಂದೆ ಮನುಷ್ಯನ ತಂತ್ರಜ್ಞಾನದ ಫಲವಾಗಿ ರೂಪುಗೊಂಡ ಸೇತುವೆಯೂ ಸಹ ಕೊಚ್ಚಿ ಹೋಗುವಂತದ್ದು ತೇಜಸ್ವಿಯವರಿಗಿದ್ದ ಪ್ರಕೃತಿಯ ಕುರಿತಾದ ಆಳವಾದ ದೃಷ್ಟಿಕೋನವಾಗಿದೆ. ಪ್ರಕೃತಿಯು ಮುನಿಸಿಕೊಂಡು ಅದು ನಿರ್ಮಿಸುವ ಚಕ್ರವ್ಯೂಹದೊಳಗೆ ಮನುಷ್ಯನು ಸಿಲುಕಿಕೊಂಡು ಹೊರಬರಲಾರದೆ ಪರದಾಡುವಂತಹ ಸ್ಥಿತಿಯನ್ನು ಎದುರಿಸಬೇಕಾಗುತ್ತದೆ.

ಕರ್ವಾಲೋ ಕಾದಂಬರಿಯಲ್ಲಿ ಬರುವ ನಿರೂಪಕನು ವ್ಯವಸಾಯಗಾರನಾಗಿದ್ದು, ಅಲ್ಲಿನ ವಾತಾವರಣವು ಹದಗೆಡುತ್ತಿರುವ ಕಾರಣದಿಂದ ಮತ್ತು ಬೆಳೆಗೆ ಉಂಟಾಗುತ್ತಿರುವ ಹಾನಿಯಿಂದ ಬೇಸರಗೊಂಡು ತೋಟವನ್ನು ಮಾರಿ ನಗರಕ್ಕೆ ವಲಸೆ ಹೋಗಬೇಕೆಂದು ತೀರ್ಮಾನಿಸುವುದು ಗ್ರಾಮೀಣ ಪರಿಸರದಲ್ಲಿ ಇರುವ ನಾನಾ ತೊಂದರೆಗಳನ್ನು ತೆರೆದಿಡುತ್ತದೆ, ಬಹುತೇಕ ತೇಜಸ್ವಿ ಕಾದಂಬರಿಗಳ ವಸ್ತುವೂ ಸಹ ಗ್ರಾಮೀಣ ಪರಿಸರವೇ ಆಗಿದೆ.

ಸ್ವರೂಪ ಕಾದಂಬರಿಯಲ್ಲಿ ಬರುವ ಶಿಕಾರಿಯ ಚಿತ್ರಣವು ತಾತ್ವಿಕತೆಯ ಪ್ರಶ್ನೆಯಾಗಿ ಮತ್ತು ಹಲವಾರು ಅನುಭವಗಳ ಶೋಧವಾಗಿ ಮೂಡಿಬಂದರೆ, ಬದಲಾದ

ಕಾಲಘಟ್ಟದಲ್ಲಿ ‘ಹೊಸ ದಿಗಂತದೆಡೆಗೆ’ ಎಂಬ ಚಿಂತೆಯು ಫಲಶೃತಿಯಾಗಿ ಮಾಯಾಲೋಕ ಕಾದಂಬರಿಯಲ್ಲಿ ಬರುವ ಶಿಕಾರಿಯ ಚಿತ್ರಣವು ಪ್ರಕೃತಿಯಲ್ಲಿ ನಡೆಯುವ ಒಂದು ಸಹಜ ಪ್ರಸಂಗದಂತೆ ನಿರೂಪಿತವಾಗಿದೆ.

‘ಹಂಗೆ ಹೇಳಕ್ಕೆ ಆಗಲ್ಲಾ ಮಾರಾಯಾ! ಹಿಂದೆ ಅವನ ಹತ್ರ ಇದ್ದುವಲ್ಲಾ ಟಾಮಿ, ಟೈಗರ್, ಜಾಕಿ ಅವಕ್ಕೆ ಸೂರಣ್ಣ ಎಂಥಾ ಶಿಕಾರಿ ಕಲಿಸಿದ್ದ ಗೊತ್ತಾ. ಬ್ಯಾರೆ ಊರಿನೋರೆಲ್ಲಾ ಬಂದು ಅವಕ್ಕೂ ಪಾಲು ಕೊಡ್ತೀವಿ ಅಂತ ಹೇಳಿ ಕರಕೊಂಡು ಹೋಗ್ತಿರಲಿಲ್ವಾ! ಅವನ ಹಿಂದೆ ನಾಕು ದಿನ ತಿರುಗಿದರೆ ಇವು ಶಿಕಾರಿ ಕಲಿತು ಬಿಡ್ತವೆ ಕಣೋ’’ (ಮಾಯಾಲೋಕ-೧, ಪು-೧೨೬, ಪ್ರ.ಪುಸ್ತಕ ಪ್ರಕಾಶನ, ಮೊದಲನೇ ಮುದ್ರಣ ೨೦೦೬, ಲೇ. ಕೆ.ಪಿ. ಪೂರ್ಣಚಂದ್ರ ತೇಜಸ್ವಿ)

ಮಾಯಾಲೋಕ ಕಾದಂಬರಿಯಲ್ಲಿ ಶಿಕಾರಿ ಎನ್ನುವುದು ಲೌಕಿಕ ನೆಲೆಯಲ್ಲಿ ಸಹಜವಾಗಿ ಮೂಡಿಬಂದಿದೆ. ಕಾಡಿನಲ್ಲಿ ಸಾಮಾನ್ಯ ಜನ ಬೇಟೆ ನಾಯಿಯೊಂದಿಗೆ ಭಾಗವಹಿಸಿ ನಡೆಸುವ ಶಿಕಾರಿ ಕೇವಲ ಮಾಂಸದ ಬಯಕೆಗಾಗಿ ಎಂದರೆ ತಪ್ಪಾಗುವುದಿಲ್ಲ.

‘ಶಿಕಾರಿ ಒಂದು ಅನಂತವಾದ ಜೂಜು, ಸುಮ್ಮನೆ ಕುಳಿತು ಕಾಡಿನ ಅಗಾಧ ಮೌನವನ್ನು ನಿಟ್ಟಿಸುತ್ತಿರಬೇಕು. ಕಾಲ ಸರಿಯುತ್ತದೆ, ಏನೋ ಕೂಗುತ್ತದೆ, ಏನೋ ಸರಸರ ಎನ್ನುತ್ತದೆ, ನಿನ್ನ ಎದೆಯಲ್ಲಿ ರಕ್ತ ಬಿಸಿಯಾಗುತ್ತದೆ. ಎದುರಿಗಿನ ಪೊದೆಯಾಚೆಗಿನ ಸುಮ್ಮನೆ ನಿಟ್ಟಿಸುತ್ತೀಯ. ತಲೆಯೊಳಗೆ ಒಂದು ದೊಡ್ಡ ಕೊಬ್ಬಿದ ಹಂದಿ ಅಲ್ಲಿಂದ ಬರುವುದು ಕಾಣುತ್ತದೆ. ಕಲ್ಪನೆಯನ್ನು ಹಾಗೇ ಸಾಕ್ಷಾತ್ಕರಿಸಿಕೊಳ್ಳಲು ಆ ಪೊದೆಗೂ ಇನ್ನೊಂದು ಪೊದೆಗೂ ನಡುವೆ ಇರುವ ಶೂನ್ಯವನ್ನೇ ನಿಟ್ಟಿಸುತ್ತೀ - ಆದರೆ ನಿನ್ನ ತಲೆಯ ಮೇಲೆ ರೆಂಬೆಯನ್ನು ಚಾಚಿರುವುದು ಸ್ವರ್ಗದ ಕಲ್ಪವೃಕ್ಷವಲ್ಲ ಸದ್ದಾಗುವುದು ಹಾಗೇ ನಿಂತು ಹೋಗುತ್ತದೆ ಏನೋ ಚಿಟ್ಟಿಳಿಲೋ, ಹಕ್ಕಿಯೋ ಇರಬೇಕೆಂದು ಕೊಳ್ಳುತ್ತೀಯಾ. ಹಾಗೆಯೇ ನಿನ್ನ ಕಲ್ಪನೆ ಬಾಡುತ್ತದೆ, ಮಾಸುತ್ತದೆ ಕೊನೆಗೆ ಅಳಿಸಿಯೇ ಹೋಗುತ್ತದೆ, ಆದರೆ ಆ ಮೌನವೇ ನಿಧಾನವಾಗಿ ಇನ್ನೊಂದು ಕಲ್ಪನೆಗೆ ದಾರಿ ಮಾಡಿಕೊಡುತ್ತದೆ. ಮರೆಯಲ್ಲಿ ಅಡಗಿಸಿಕೊಂಡು ಅನಂತವಾದ ನಿಧಿಗೆ ಜೂಜಾಡುವ ಜೂಜುಗಾರನಂತೆ ನಿನ್ನ ಸ್ವಪ್ರತಿಭೆ ಒಂದಾದ ಮೇಲೊಂದು ದಾಳಗಳನ್ನು ಉರುಳಿಸುತ್ತದೆ, ಮೌನ ಅದನ್ನು ಸುಳ್ಳು ಮಾಡುತ್ತದೆ. ಹೀಗೆ ಗಂಟೆಗಳು, ದಿನಗಳು, ವಾರಗಳು, ಜೀವಮಾನ ಕಳೆಯುತ್ತದೆ. ಒಂದು

ಇದ್ದಕ್ಕಿದ್ದಂತೆ ಏನೋ ಒಂದು ಓಡುತ್ತದೆ, ನೀನು ಹೊಡೆಯುತ್ತೀಯ, ಅದು ಬೀಳುತ್ತದೆ ಅಥವಾ ಗಾಯವಾಗಿ ಓಡುತ್ತದೆ. ಆ ಘಟನೆ ಎಷ್ಟೊಂದು ಅಭೂತ ಪೂರ್ವವಾಗಿರುತ್ತೆಂದರೆ ನಿನ್ನ ಮನಸ್ಸಿಗೆ ಹೊಸದೊಂದು ಕೋನವನ್ನು ಕೊಡುತ್ತದೆ. ನಿನ್ನ ಕಲ್ಪನೆಗೆ ಹೊಸತೊಂದು ಹರಿತವನ್ನು, ವೇಗವನ್ನು ತಂದುಕೊಡುತ್ತದೆ. ಶಿಕಾರಿ ಒಂದು ವ್ಯಸನ ಅದೊಂದು ಆಲೋಚನೆಗೆ ಹತ್ತುವ ಚಟ. ಆದರೆ ಶಿಕಾರಿಯನ್ನು ಕಂಡರೆ ನನಗೆ ಇಷ್ಟ ಏಕೆಂದು ಸರಿಯಾಗಿ ಗೊತ್ತಿಲ್ಲ. ಮಾಂಸದ ಆಸೆಗಂತೂ ಅಲ್ಲ. ಇನ್ನು ಕಾಲ ಕಳೆಯಬಹುದೆಂದೇನೋ ಇರಬಹುದು.'' (ಸ್ವರೂಪ, ಪು-೭೬, ೭೭. ಪ್ರ. ಪುಸ್ತಕ ಪ್ರಕಾಶನ, ಲೇ. ಕೆ.ಪಿ. ಪೂರ್ಣಚಂದ್ರತೇಜಸ್ವಿ)

ನವ್ಯ ಸಾಹಿತ್ಯದ ಪ್ರತಿಮೆ ಸಂಕೇತಗಳು, ಸಂಕೀರ್ಣತೆಗಳು ಶಿಕಾರಿಯನ್ನು ಸಹ ಅಲೌಕಿಕತೆಗೆ ಏರಿಸಿರುವುದನ್ನು ತಾತ್ವಿಕವಾಗಿ ಶಿಕಾರಿಯನ್ನು ಚರ್ಚಿಸಿ ಗೂಢಾರ್ಥದಲ್ಲಿ ಶಿಕಾರಿಯ ಕುರಿತು ಪಾತ್ರಗಳು ಆಲೋಚಿಸುತ್ತವೆ. ಇದು ಕಾಡಿನಲ್ಲಿ ಕೋವಿ ಹಿಡಿದು ನಡೆಸುವ ಶಿಕಾರಿಯಲ್ಲ. ಕಾಲದ ಬಗೆಗೆ ಹಲವಾರು ಚಿಂತನೆಗಳನ್ನು ಒಳಗೊಂಡಂತೆ ಸ್ವರೂಪ ಕಾದಂಬರಿಯಲ್ಲಿ ಬರುವ ಶಿಕಾರಿ ಚಿತ್ರಣ ರೂಪುಗೊಂಡಿದೆ.

ಸ್ವರೂಪ ಕಾದಂಬರಿಯ 'ಶಿಕಾರಿ' ವ್ಯಂಗ್ಯಾರ್ಥವನ್ನು ಪ್ರತಿನಿಧಿಸಿದರೆ 'ಮಾಯಾಲೋಕ' ಕಾದಂಬರಿಯ 'ಶಿಕಾರಿ'ಯು ವಾಚ್ಯಾರ್ಥವನ್ನು ಪ್ರತಿನಿಧಿಸುತ್ತದೆ. ನವ್ಯ ಸಾಹಿತ್ಯದಲ್ಲಿ ಬಳಕೆಯಾಗುವ ಪ್ರತಿಯೊಂದು ಪದವು ಧ್ವನ್ಯರ್ಥವಾಗಿ ಅವುಗಳ ಬೆನ್ನೇರಿ ಹೋದಾಗ ಅರ್ಥ ಸ್ಫುರಿಸುತ್ತದೆ. ಆದರೆ ಮಾಯಾಲೋಕ ಕಾದಂಬರಿಯು ಯಾವುದೇ ಸಾಹಿತ್ಯ ಪಂಥಕ್ಕೆ ಸೇರದೆ ನೇರ ನಿರೂಪಣೆಯ ತಂತ್ರವನ್ನು ಅನುಸರಿಸಿದೆ ಮತ್ತು ಭಾಷೆಯೂ ಸಹ ಸರಳವಾಗಿದೆ. ಚಿದಂಬರ ರಹಸ್ಯ ಕಾದಂಬರಿಯಲ್ಲಿ ವ್ಯಕ್ತವಾಗಿರುವ ಪರಿಸರವು ಸಾಮಾಜಿಕ ಜೀವನದೊಂದಿಗೆ, ಸಾಂಸ್ಕೃತಿಕ ಜಗತ್ತಿನೊಂದಿಗೆ ಬೆಸೆದುಕೊಂಡಿದೆ. ಕೆಸರೂರಿನ ಪರಿಸರವು ನಾಶಗೊಳ್ಳುತ್ತಿದೆ ಎಂದರೆ ಅಲ್ಲಿನ ಸಾಮಾಜಿಕ ಜೀವನ ಮತ್ತು ಸಾಂಸ್ಕೃತಿಕ ಜಗತ್ತು ಸಹ ನಾಶಗೊಳ್ಳುತ್ತದೆ, ಸಾಮಾಜಿಕ ಜೀವನ ಮತ್ತು ಸಾಂಸ್ಕೃತಿಕ ಜಗತ್ತಿನ ಮೂಲನೆಲೆ ಪರಿಸರದಲ್ಲಿಯೇ ಅಡಗಿದೆ. ಒಂದಕ್ಕೊಂದು ಬೇರ್ಪಡಿಸಲಾಗದ ಅನ್ಯೋನ್ಯ ಸಂಬಂಧವನ್ನು ಹೊಂದಿವೆ.

'ಕಾಡುಗಳನ್ನು ನಾಶ ಮಾಡಿದಾಗ ಅಲ್ಲಿರುವ ಪ್ರಾಣಿಗಳನ್ನು, ಅವುಗಳ ಪರಿಸರವನ್ನು ನಾಶ ಮಾಡಿದಾಗ ರಹಸ್ಯ, ಗೌಪ್ಯ, ಅದ್ಭುತಗಳ ನಿರಂತರ ನಿಧಿಯೊಂದನ್ನು ನಮ್ಮ ಕಿರಿಯ ಜನಾಂಗ ಕಳೆದುಕೊಂಡಂತೆ ಮನಸ್ಸು ಖಿನ್ನವಾಗುತ್ತದೆ. ಈ ದುರಂತದ ದುಃಖವನ್ನು ಅಂಕಿ-ಸಂಖ್ಯೆಗಳ ಆಧಾರದ ಮೇಲೆ ಸಿದ್ಧಾಂತಗಳ ಮುಖಾಂತರ ವಿಶ್ಲೇಷಿಸಿ ಪರಿಸರ ಸಂರಕ್ಷಣೆಯ ಬಗ್ಗೆ ಜನಗಳಿಗೆ ಹೇಳಲು ಮನಸ್ಸೇ ಬರುವುದಿಲ್ಲ. ಏಕೆಂದರೆ ನಾನು ಕಂಡಂತೆ ಕಾಡನ್ನು ಕಂಡಿಲ್ಲದ ಅನುಭವಿಸದ ಮನಸ್ಸುಗಳಿಗೆ ನನ್ನ ಮನಸ್ಸಿನ ದುಗುಡವನ್ನು ನಿರ್ಜೀವ ಅಂಕಿ-ಸಂಖ್ಯೆಗಳ ವಿಶ್ಲೇಷಣೆಯ ಮುಖಾಂತರ ಹೇಳಿ ಹೇಗೆ ಪ್ರತಿಸ್ಪಂದನ ಉಂಟುಮಾಡಲಿ? (ತೇಜಸ್ವಿಲೋಕ, ಪು-೭೨) ಎಂದು ದುಃಖದಿಂದ ವಿವರಿಸುತ್ತಾರೆ. ಪರಿಸರವೆಂಬುದು ಒಂದು ಜೀವಕೇಂದ್ರಿತನೆಲೆ, ಅಂತಹ ಪರಿಸರವು ನಾಶವಾಗುವುದರ ಬಗ್ಗೆ ಸ್ಪಂದಿಸದ ಮನಸುಗಳಿಗೆ ಅಂಕಿ-ಸಂಖ್ಯೆಗಳ ಮುಖಾಂತರ ವಿವರಿಸಿದರೆ ಯಾವುದೇ ಪ್ರಯೋಜನವಿಲ್ಲ. ಪ್ರಕೃತಿಯನ್ನು ಕಾಣುವ ಅರ್ಥೈಸಿಕೊಳ್ಳುವ, ದರ್ಶನಪ್ರಜ್ಞೆ, ಸೂಕ್ಷ್ಮ ದೃಷ್ಟಿಕೋನ, ಅಪಾರವಾದ ಪ್ರೀತಿ ಇರಬೇಕೆಂಬುದು ತೇಜಸ್ವಿರವರ ಅಭಿಪ್ರಾಯವಾಗಿದೆ.

# ಅಧ್ಯಾಯ - ೩

## ತೇಜಸ್ವಿಯ ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಸಾಂಸ್ಕೃತಿಕ ನೆಲೆಗಟ್ಟು

ಸಂಸ್ಕೃತಿ ಎಂಬ ಪರಿಕಲ್ಪನೆಗೆ ಒಂದು ನಿರ್ದಿಷ್ಟ ಅರ್ಥವು ಪ್ರಾಪ್ತವಾಗದೇ ಇರುವುದರಿಂದ ಮತ್ತು ಸಂಸ್ಕೃತಿ ಎಂಬ ಪರಿಕಲ್ಪನೆಯ ಅರ್ಥಗಳು ಕಾಲಕಾಲಕ್ಕೆ ಬದಲಾಗುತ್ತ ಹೋಗುವುದರಿಂದ ಸಂಸ್ಕೃತಿ ಎಂದರೆ ಇದೇ ಎಂದು ಗುರುತಿಸುವುದು ಕಷ್ಟಸಾಧ್ಯವೇ ಸರಿ.

ಸಂಸ್ಕೃತಿಯನ್ನು ಕಾಲಘಟ್ಟಕ್ಕೆ ತಕ್ಕಂತೆ ಅರ್ಥೈಸಿ ಸಂಸ್ಕೃತಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಪ್ರಕ್ರಿಯೆಯ ಮುಖಾಂತರ ಗಮನಿಸಿದರೆ ಸಂಸ್ಕೃತಿಯು ಒಂದು ಚೌಕಟ್ಟಿಗೆ ಒಳಗಾಗದೆ, ಹರಿವ ನೀರಾಗಿ ಕಂಡುಬಂದಿದೆ. ಇದೇ ಸಂಸ್ಕೃತಿ, ಇದು ಸಂಸ್ಕೃತಿ ಅಲ್ಲ ಎಂದು ನಿಖರ ತೀರ್ಮಾನಕ್ಕೆ ಬರುವುದು ಕಷ್ಟ ಸಾಧ್ಯವೇ ಸರಿ.

ಸಂಸ್ಕೃತಿ ಎಂದರೆ ಜೀವನವಿಧಾನ ಎಂಬ ಸರಳ ಗ್ರಹಿಕೆಗೂ ಬರುವುದು ಉಂಟು. ಜೀವನ ವಿಧಾನವೆಂದರೆ ಯಾರ ಜೀವನ ವಿಧಾನ ನಗರದ್ದೋ, ಹಳ್ಳಿಯದ್ದೋ, ಬುಡಕಟ್ಟುಗಳದ್ದೋ ಎಂಬ ಸಮಸ್ಯೆ ತಲೆದೋರುತ್ತದೆ.

ಸಂಸ್ಕೃತಿ ಎಂದರೆ ಮೇಲ್ಮಟ್ಟದ 'ಸುಸಂಸ್ಕೃತ' ಎಂದು ಹಲವಾರು ವಿದ್ವಾಂಸರು ಬಳಸಿದ್ದಾರೆ. ಅಂದರೆ ಜನಪ್ರಿಯ ಅರ್ಥದಲ್ಲಿ ಮತ್ತು ಯಾವುದನ್ನು ನಾವು ಅನುಕರಿಸಲು ಸಾಧ್ಯವೋ, ಅದನ್ನು ಸಂಸ್ಕೃತಿ ಎಂದು ಗ್ರಹಿಸಲಾಯಿತು. ಸಂಸ್ಕೃತಿ ಎಂದರೆ ಜೀವನ ವಿಧಾನ, ಸಜ್ಜನಿಕೆ ಅದೊಂದು ಸಹಜವಾಗಿ ಮೂಡಿ ಬರುವ ಪ್ರಕ್ರಿಯೆ, ಕಲಾಪ್ರಪಂಚವನ್ನು ಪ್ರತಿನಿಧಿಸುವಂತದ್ದು ಹೀಗೆ ಹಲವಾರು ದೃಷ್ಟಿಕೋನಗಳಲ್ಲಿ ಸಂಸ್ಕೃತಿ ಎಂಬ ಪರಿಕಲ್ಪನೆಯನ್ನು ಗ್ರಹಿಸಲಾಗಿದೆ. ಮತ್ತೊಂದು ಅರ್ಥದಲ್ಲಿ ಪ್ರಕೃತಿಯಿಂದ ಸಂಸ್ಕಾರಗೊಂಡದ್ದು ಎಂದು ಸಂಸ್ಕೃತಿಯನ್ನು ನಿರೂಪಿಸಬಹುದು.

ಮರವು ಪ್ರಕೃತಿಯ ಸಂಕೇತವಾದರೆ, ಅದೇ ಮರದಿಂದ ರೂಪಿತವಾಗುವ ಕುರ್ಚಿಯನ್ನು ಇಲ್ಲಿ ಸಂಸ್ಕಾರಗೊಳ್ಳುವಿಕೆ ಅಥವಾ ರೂಪಿಸುವಿಕೆ ಎಂಬ ಅರ್ಥದಲ್ಲಿ ಸಂಸ್ಕೃತಿಯನ್ನು ಬಳಸಲಾಗುತ್ತದೆ. ಇದೇ ಅರ್ಥವು ವ್ಯಾಪಕವಾಗಿ ಬಳಕೆಯಾಗುತ್ತಿತ್ತು.

ಯಾವ ಒಂದು ಸಾಮಾಜಿಕ ಜೀವನಕ್ರಮದಲ್ಲಿ ಅತ್ಯುತ್ತಮವಾದದ್ದೋ ಅದನ್ನು ಸಂಸ್ಕೃತಿ ಎಂದು ಪೂರ್ವದ ಸಂಸ್ಕೃತಿ ಗ್ರಹಿಕೆಗಳು ನಿರೂಪಿಸುತ್ತಿದ್ದವು.

ಉದಾ: ಬೇಲೂರು, ಹಳೇಬೀಡು, ಇದು ಒಂದು ಜೀವನಕ್ರಮದಲ್ಲಿ ಅತ್ಯುತ್ತಮವಾದದ್ದು ಮತ್ತು ಹೊರಜಗತ್ತಿಗೆ ತೋರ್ಪಡಿಸಿಕೊಳ್ಳಲು ಸಮರ್ಥವಾದದ್ದು ಎಂಬ ಕಾರಣದಿಂದ ಸಂಸ್ಕೃತಿಯ ಗ್ರಹಿಕೆಗಳು ಪ್ರಧಾನವಾದ ನೆಲೆಯಲ್ಲಿಯೇ ಉಳಿದಿದ್ದವು.

ಒಂದು ಜೀವನಕ್ರಮದಲ್ಲಿ ಯಾವುದು ಉತ್ತಮವೋ ಅದನ್ನು ಸಮಾಜ ನಿರ್ಧರಿಸುತ್ತದೆ. ಅದೇ ಒಂದು ಜನತೆಯ ಸಂಸ್ಕೃತಿಯಾಗಿ ರೂಪುಗೊಳ್ಳುತ್ತದೆ. ಸಂಸ್ಕೃತಿಯ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಹಲವಾರು ಪರಿಭಾಷೆಗಳು ರೂಢಿಯಲ್ಲಿವೆ.

ಪ್ರಧಾನ ಸಂಸ್ಕೃತಿ - ಅಧೀನ ಸಂಸ್ಕೃತಿ

ಸಂಸ್ಕೃತಿ - ಉಪಸಂಸ್ಕೃತಿ

ಸಂಸ್ಕೃತಿ - ಪ್ರತಿ ಸಂಸ್ಕೃತಿ

ಮೇಲಿನ ಮೂರು ಪರಿಭಾಷೆಗಳಲ್ಲಿ ಪ್ರಧಾನ ಸಂಸ್ಕೃತಿಯು ಅಧೀನ ಸಂಸ್ಕೃತಿಯ ಮೇಲೆ ಒಂದು ಬಗೆಯ ಏರುವಿಕೆಯನ್ನು ಪ್ರತಿನಿಧಿಸುತ್ತದೆ. ಎರಡನೇ ಪರಿಭಾಷೆಯಲ್ಲೂ ಸಂಸ್ಕೃತಿ, ಉಪಸಂಸ್ಕೃತಿ ಎಂಬಲ್ಲಿ ಒಂದು ಸಂಸ್ಕೃತಿಯ ಅಂಗವಾಗಿಯೇ ಅದರ ನೆರಳಿನಲ್ಲಿಯೇ ಉಪ ಸಂಸ್ಕೃತಿಯು ಪ್ರಕಟಗೊಳ್ಳುತ್ತದೆ. ಆದರೆ ಮೂರನೆಯ ಪರಿಭಾಷೆಯಲ್ಲಿ ಸಂಸ್ಕೃತಿಯು ಯಜಮಾನ ಸಂಸ್ಕೃತಿಯ ಆಲೋಚನೆಗಳನ್ನು ಒಪ್ಪಿಕೊಳ್ಳದೇ ಅವುಗಳಿಗೆ ಪ್ರತಿರೋಧವನ್ನು ಒಡ್ಡಿ ತನ್ನದೇ ದೃಷ್ಟಿಕೋನವನ್ನು ಪ್ರತಿಸಂಸ್ಕೃತಿ ಸಾಬೀತು ಪಡಿಸುತ್ತದೆ, ಮೂರನೇ ಮಾದರಿಯ ಸಂಸ್ಕೃತಿ ಚಿಂತನೆಯನ್ನು ತೇಜಸ್ವಿ ಕಾದಂಬರಿಗಳು ಮಂಡಿಸುತ್ತವೆ, ಸಂಸ್ಕೃತಿ ಎಂದರೆ ಸಂಸ್ಕರಿಸಲ್ಪಟ್ಟದ್ದು ಮತ್ತು ಒಂದು ಸಮುದಾಯದ ಜೀವನಕ್ರಮವನ್ನು ಮಾತ್ರ ಚಿತ್ರಿಸದೇ, ಅಂಚಿನ ಸಮುದಾಯಗಳ ಜೀವನಕ್ರಮವನ್ನೂ ಸಹ ಚಿತ್ರಿಸಿ ಸಂಸ್ಕೃತಿಯ ವ್ಯಾಖ್ಯಾನವನ್ನು ತೇಜಸ್ವಿಕಾದಂಬರಿಗಳು ಮರು ವಿಮರ್ಶೆಗೆ ಒಳಪಡಿಸುತ್ತವೆ.

ಸಂಸ್ಕೃತಿಯನ್ನು ಸಾಮಾಜಿಕ ನೆಲೆಯಲ್ಲಿಯೇ ತೇಜಸ್ವಿ ಕಾದಂಬರಿಗಳು ಪ್ರಕಟಿಸುತ್ತವೆ. ಸಂಸ್ಕೃತಿಯು ಪಲ್ಲಟಗೊಳ್ಳಲು ಬಾಹ್ಯ ಕಾರಣವಿರುವಂತೆ ಆಂತರಿಕ ಕಾರಣಗಳೂ ಸಹ ಮುಖ್ಯ. ಅಂತಹ ಕಾರಣಗಳನ್ನು ತೇಜಸ್ವಿ ಕಾದಂಬರಿಗಳು

ಪ್ರತಿಬಿಂಬಿಸುತ್ತವೆ. ಸಂಸ್ಕೃತಿಯ ಪರಿಕಲ್ಪನೆಯನ್ನು ತೇಜಸ್ವಿ ಕಾದಂಬರಿಗಳಿಗೆ ಅನ್ವಯಿಸಿ ಹೇಳುವುದಾದರೆ ಸಾಮಾಜಿಕ ಜೀವನ, ದೇಸಿ ಸಂಸ್ಕೃತಿ, ಜಾಗತೀಕರಣದಿಂದ ಉಂಟಾಗುವ ಪಲ್ಲಟಗಳು ಈ ಎಲ್ಲಾ ಅಂಶಗಳನ್ನು ಸಾಂಸ್ಕೃತಿಕ ಅಧ್ಯಯನದೊಳಗೆ ನಿರೂಪಿಸಬಹುದು.

ಆಧುನಿಕೀರಣದ ಭರಾಟೆಯಿಂದ ದೇಸಿ ಸಂಸ್ಕೃತಿಯು ನಶಿಸಿಹೋಗುವ ದುರಂತವನ್ನು 'ಜುಗಾರಿಕ್ರಾಸ್' ಕಾದಂಬರಿಯಲ್ಲಿ ಕಾಣಬಹುದು. 'ನಾಗರೀಕತೆಯೊಳಗೆ ಪ್ಲಾಸ್ಟಿಕ್ ಕಾಲಿಟ್ಟಾಗ ಈ ತೆಳ್ಳಗೆ ಪಾರದರ್ಶಕವಾಗಿ ಮಿಂಚುವ ಮೋಹಿನಿಯ ವಿಶ್ವರೂಪ ಯಾರಿಗೂ ಗೊತ್ತಿರಲಿಲ್ಲ. ಅನೇಕ ಹಳ್ಳಿ ಮನೆತನ ಬುಡಕಟ್ಟುಗಳ ನಿರ್ನಾಮಕ್ಕೆ ಇದು ಕಾರಣವಾದೀತೆಂದು ಯಾರೂ ಕನಸು ಮನಸಿನಲ್ಲಿಯೂ ಊಹಿಸಿರಲಿಲ್ಲ. ಖಾಲಿ ಜಾಗಗಳ ಸಂದು ಗೊಂದುಗಳಲ್ಲೆಲ್ಲಾ ಹಬ್ಬಿ ಆಕ್ರಮಿಸುವ ಪಾರ್ಥೇನಿಯಮ್, ಯುಪೆಟೋರಿಯಮ್, ಕಳೆಗಳಂತೆ ಪ್ಲಾಸ್ಟಿಕ್ ಪಾಲಿಯುರಿಥೇನ್, ಪಾಲಿಎಥಿಲೀನನ್, ಪಾಲಿಫೈಬರ್, ಪಾಲಿಮಾರ್ ಹೀಗೆ ನಾನಾ ಅವತಾರಗಳನ್ನೆತ್ತಿ ಮಾರುಕಟ್ಟೆಯ ಎಲ್ಲಾ ಕ್ಷೇತ್ರಗಳಿಗೆ, ಎಲ್ಲಾ ಅವಕಾಶಗಳಿಗೆ ಮುತ್ತಿಗೆ ಹಾಕಿತು.' (ಜುಗಾರಿ ಕ್ರಾಸ್, ಪುಟ-೧೦, ಲೇ. ಕೆ.ಪಿ.ಪೂರ್ಣಚಂದ್ರತೇಜಸ್ವಿ).

ಒಂದು ಗ್ರಾಮ ಪರಿಸರದೊಳಕ್ಕೆ ಪ್ಲಾಸ್ಟಿಕ್ ಎಂಬ ರಾಕ್ಷಸಿ ಪ್ರವೃತ್ತಿಯ ವಸ್ತು ಕಾಲಿಟ್ಟು ಮೇದರಹಳ್ಳಿ ಎಂಬ ಇಡೀ ಹಳ್ಳಿಯನ್ನೇ ನಾಶಪಡಿಸುವುದು ದೊಡ್ಡ ದುರಂತವಾಗಿದೆ. ಕಾಫಿ ಮೊಳಕೆಗಳನ್ನು ನೆಡುವ ಬಿದಿರಿನ ಕುಕ್ಕೆಗಳಿಗೆ ಬದಲಾಗಿ ಪ್ಲಾಸ್ಟಿಕ್ ಚೀಲಗಳು ತಮ್ಮ ಅಟ್ಟಹಾಸವನ್ನು ಮೆರೆದು ಮೇದರಹಳ್ಳಿ ಜನರ ಕಸುಬಾಗಿದ್ದ ಕುಕ್ಕೆಗಳನ್ನು ತಯಾರಿಸುವ ಕಾರ್ಯಕ್ಕೆ ತೊಂದರೆಯೊಡ್ಡಿ ಮೇದರಹಳ್ಳಿಯನ್ನೇ ನಾಶಪಡಿಸುತ್ತದೆ. ಜಾಗತೀಕರಣ, ಆಧುನೀಕರಣವೆಂಬ ಭರಾಟೆಯಲ್ಲಿ ಬೀಗುತ್ತಿರುವ ನಾವು ಇಂದು ಅದರ ದುಷ್ಪರಿಣಾಮಗಳ ಬಗ್ಗೆ ಚಿಂತಿಸದೇ ಹೋದರೆ ಮೇದರಹಳ್ಳಿಗೆ ಒದಗಿದ ಸ್ಥಿತಿಯೇ ನಮ್ಮ ದೇಶಕ್ಕೂ ಒದಗುವ ಕಾಲ ದೂರವಿಲ್ಲ.

ತಣ್ಣಗೆ ನಿದ್ರಿಸುತ್ತಿರುವಂತೆ ಕಾಣುತ್ತಿರುವ ಭಾರತದ ಹಳ್ಳಿಗಳಿಗೆ ಆಧುನೀಕರಣವು ಪ್ರವೇಶಿಸಿ ಉಂಟುಮಾಡುವ ತಲ್ಲಣಗಳನ್ನು 'ಜುಗಾರಿ ಕ್ರಾಸ್' ಕಾದಂಬರಿಯು ಕಟ್ಟಿಕೊಡುತ್ತದೆ. ಚಿತ್ರದುರ್ಗದಿಂದ ದೇವಪುರಕ್ಕೆ ಕಂಬಳಿ ವ್ಯಾಪಾರಕ್ಕೆ ಬಂದ ಸಿದ್ಧಪ್ಪ ದಿನಗಳೆದಂತೆ ಅಲ್ಲಿನ ಖಾಯಂನಿವಾಸಿಯೇ ಆಗುತ್ತಾನೆ. ಅವನ ವ್ಯಾಪಾರ ವಹಿವಾಟುಗಳು ಅಭಿವೃದ್ಧಿಗೊಂಡು ಒಮ್ಮೆ ಯಾರಿಗೋ ಹೋಗಬೇಕಾದ ಫೋನ್ ಕರೆ ಇವನಿಗೆ ಸಿಕ್ಕಿ,

ಫೋನ್ ಆಲಿಸುತ್ತಿದ್ದ ಹಾಗೆ ಬಾಯಿ ಕಳೆದುಕೊಂಡು ಬಿಡುಗಣ್ಣನಾದನಂತೆ, ಕೊನೆಗೆ ತಲೆ ತಲೆ ಚಚ್ಚಿಕೊಂಡು ಗೋಳಾಡಿ ಬೆಳಗಿನ ಜಾವ ಮನೆಬಿಟ್ಟು ಹೋದವನನ್ನು ಯಾರೂ ನೋಡಿರಲಿಲ್ಲವಂತೆ.

ಆಧುನೀಕರಣದ ಪ್ರತೀಕವಾದ ಫೋನ್ ಒಂದು ಹಳ್ಳಿಗೆ ಕಾಲಿಟ್ಟಾಗ ಅದು ಹೊಂದಿರುವ ಸಂಪರ್ಕ ಜಾಲದಿಂದ ಜೀವಕ್ಕೆ ಕುತ್ತು ಬರುವಂತಹ ಕ್ರಿಯೆಯು ಆಧುನಿಕತೆಯ ಕರಾಳ ಮುಖವನ್ನು ಪರಿಚಯಿಸುತ್ತದೆ.

ತೇಜಸ್ವಿ ಸಾಹಿತ್ಯದ ಮೊದಲ ಘಟ್ಟದಲ್ಲಿ ರಚನೆಯಾದಂತಹ ಲಿಂಗ ಬಂದ (ಕತೆ), ಸ್ವರೂಪ ಮತ್ತು ನಿಗೂಢ ಮನುಷ್ಯರು ಕಾದಂಬರಿಗಳು ನವ್ಯದ ಸಂಕೀರ್ಣತೆ, ಪ್ರತಿಮೆ, ಭಾಷೆಯಲ್ಲಿ ಬಿಗಿ ಹಿಡಿತ ಮೊದಲ ಘಟ್ಟದ ಸಾಹಿತ್ಯದ ವಿಶಿಷ್ಟ ಲಕ್ಷಣಗಳು, ಎರಡನೇ ಘಟ್ಟದಲ್ಲಿ ನಾವು ಅಬಚೂರಿನ ಪೋಸ್ಟಾಫೀಸು ಕಥಾಸಂಕಲನವನ್ನು ಕಾಣಬಹುದು. ಇದು ತೇಜಸ್ವಿ ಸಾಹಿತ್ಯದ ಮತ್ತೊಂದು ಮಹತ್ವದ ಪಲ್ಲಟವನ್ನು ಸೂಚಿಸುತ್ತದೆ. ಈ ಕಥಾ ಸಂಕಲನಗಳು ಸಾಮಾಜಿಕವಾಗಿ ನಮಗೆ ಮುಖ್ಯವೆನಿಸುತ್ತವೆ. 'ಸ್ವರೂಪ ಹಾಗೂ ನಿಗೂಢ ಮನುಷ್ಯರು' ಕಾದಂಬರಿಗಳು ತೇಜಸ್ವಿರವರು ಪ್ರತಿಪಾದಿಸಿದ ವ್ಯಕ್ತಿ ವಿಶಿಷ್ಟವಾದಿ ಸಿದ್ಧಾಂತದ ಹಿನ್ನೆಲೆಯಲ್ಲಿ ವ್ಯಕ್ತಿ ಕೇಂದ್ರಿತ ಪ್ರಜ್ಞೆಯಲ್ಲಿ ರೂಪುಗೊಂಡಂತವು. ಇಲ್ಲಿ ವ್ಯಕ್ತಿ ಮುಖ್ಯವೇ ಹೊರತು ವ್ಯಕ್ತಿಯ ಹಿಂದಿರುವ ಸಾಂಸ್ಕೃತಿಕ, ಸಾಮಾಜಿಕ ಪರಿಸರವಲ್ಲ. ಆದ್ದರಿಂದ ಈ ಕಾದಂಬರಿಗಳು ಸಾಂಸ್ಕೃತಿಕವಾಗಿ ಅಷ್ಟೊಂದು ಮುಖ್ಯವೆನಿಸುವುದಿಲ್ಲ. ಅಬಚೂರಿನ ಪೋಸ್ಟಾಫೀಸು ಕಥಾ ಸಂಕಲನಕ್ಕೆ ಮುನ್ನುಡಿಯನ್ನು ಬರೆಯುತ್ತಾ ಹೊಸ ದಿಕ್ಕಿನ ಅನ್ವೇಷಣೆಯ ಬಗ್ಗೆ ಚರ್ಚಿಸುತ್ತಾ ನವ್ಯ ಸಾಹಿತ್ಯದ ಧೋರಣೆಗಳನ್ನು ಟೀಕಿಸುತ್ತಾ ಹೊಸ ಹಾದಿಯನ್ನು ತೇಜಸ್ವಿ ಕಂಡುಕೊಳ್ಳುತ್ತಾರೆ. ಈ ಒಂದು ಬದಲಾವಣೆ ಸಾಂಸ್ಕೃತಿಕವಾಗಿ ಮುಖ್ಯವೆನಿಸುತ್ತವೆ. ಅಬಚೂರಿನ ಪೋಸ್ಟಾಫೀಸು ಕಥೆಯಲ್ಲಿ ಬೋಬಣ್ಣ ಎಂಬ ಪಾತ್ರವು ಆಧುನಿಕತೆಯ ಸಂಕೇತವಾದ ಪೋಸ್ಟಾಫೀಸಿನ ಆಗಮನದಿಂದ ತನ್ನ ಶಾಂತ ಜೀವನ ಪ್ರವಾಹವು ಅಲ್ಲೋಲ-ಕಲ್ಲೋಲವಾಗುವುದನ್ನು ಕಾಣಬಹುದು. ಈ ಒಂದು ಸಮಸ್ಯೆ ಕೇವಲ ಬೋಬಣ್ಣನ ವೈಯಕ್ತಿಕ ಸಮಸ್ಯೆಯಲ್ಲ. ಇದು ಕೌಟುಂಬಿಕ ಸಮಸ್ಯೆಯಾಗಿ 'ಅಬಚೂರು' ಎಂಬ ಸಮಾಜದ ಮೇಲೆ ತನ್ನ ಪ್ರಭಾವ ಬೀರಿ ಪಲ್ಲಟಕ್ಕೆ ಎಡೆಮಾಡಿ ಕೊಡುತ್ತದೆ. ಆಧುನಿಕತೆಯಿಂದ ಉಂಟಾದ ಪಲ್ಲಟವು ಅನಾಹುತಕಾರಿಯಾದುದೇ ಹೊರತು ಅಭಿವೃದ್ಧಿ ಪರವಾದುದಲ್ಲ ಎಂಬುದು ತಿಳಿಯುತ್ತದೆ.

'ಬೋಬಣ್ಣನಿಗೆ ಈ ರೀತಿ ಅವರಿವರ ಕಾರ್ಡುಗಳನ್ನು ಓದುವುದು, ಯಾರಿಗಾದರೂ ಯಾವುದಾದರು ಪುಸ್ತಕ ಬಂದರೆ ಅದನ್ನೇ ಉಪಾಯವಾಗಿ ಬಿಚ್ಚಿ ಓದುವುದು, ಅನಂತರ ಅದನ್ನೇ ತಲುಪಿಸುವುದು ಮುಂತಾದ ಚೇಷ್ಟೆಗಳು ಸಪ್ಪೆಯಾದ ಪೋಸ್ಟಾಫೀಸಿನ ಕೆಲಸದಲ್ಲಿ ಒಂದು ಬಗೆಯ ಮನರಂಜನೆಯನ್ನೇ ಒದಗಿಸುತ್ತಿದ್ದವು.

ಅಜೀಜನಿಗೆ ಬಂದ ನಗ್ನ ಚಿತ್ರನೋಡಿದ ಮೇಲಂತೂ ಕವರಿನೊಳಗೆ ಸುತ್ತಿ ಬಂದುದೆಲ್ಲಾ ನಗ್ನ ಚಿತ್ರವೇ ಎಂದು ತಿಳಿಯುತ್ತಿದ್ದನು ಮಾಸಿಕಗಳೋ, ವಾರಪತ್ರಿಕೆಗಳೋ, ಯಾರಿಗಾದರೂ ಬಂದರೆ ಅದರ ಮೂಲೆ ಮೂಲೆಗಳಲ್ಲಿ ನಗ್ನ ಚಿತ್ರಗಳಿಗಾಗಿ ಹುಡುಕುತ್ತಿದ್ದನು.

ಇದರಿಂದ ಬೋಬಣ್ಣ ಅನೇಕ ಸಮಸ್ಯೆಗಳಿಗೆ ಸಿಕ್ಕಿ ಹಾಕಿಕೊಳ್ಳುತ್ತಾನೆ. ಬೋಬಣ್ಣನ ಹೆಂಡತಿ ಕಾವೇರಿಗೂ ಅತ್ತೆ ಮಾಚಮ್ಮನಿಗೂ, ಇದರ ಬಿಸಿ ತಟ್ಟುತ್ತದೆ. 'ನನಗೇನೋ ನಮ್ಮ ಮನೆ ಪೋಸ್ಟಾಫೀಸು ಮಾಡಿದ್ದೇ ಸರಿಬರಲಿಲ್ಲ. ಇವರಿಗೆ ತಾನು ಬಾರಿ ದೊಡ್ಡ ಆಫೀಸರು ಎಂದು ಜಂಬ ಬಂದಿದೆ. ಈ ತಿಂಗಳ ಸಂಬಳದಲ್ಲಿ ಕನ್ನಡಕ ತರ್ತೀನಿ ಎಂದು ಹೇಳಿದ್ದರು ಎಂದು ಕಾವೇರಿ ಬಯ್ಯುತ್ತಾಳೆ. ಮನೆಯನ್ನು ಪೋಸ್ಟಾಫೀಸು ಮಾಡಿದನಂತರ ಕಾಗದ ಬರೆಸಲು ಮತ್ತು ಓದಿಸಲು ಹಳ್ಳಿಯ ಅನಕ್ಷರಸ್ಥರೆಲ್ಲಾ ಅಲ್ಲಿ ನೆರೆಯುತ್ತಿದ್ದರಷ್ಟೇ. ಈ ಗುಂಪುಗಳು ಕ್ರಮೇಣ ಕ್ಲಬ್ಬಿನಲ್ಲಿ ನೆರೆಯುವ ಮನರಂಜನೆಯ ಗುಂಪುಗಳಂತೆ ಪರಿವರ್ತಿತವಾಗುವುದನ್ನು ಮಾಚಮ್ಮ ಗಮನಿಸಿದಳು. ಬೋಬಣ್ಣನ ಅಶಾಂತಿ ಅವನ ಕುಟುಂಬದ ಅಶಾಂತಿಯ ಜೊತೆ ಊರಿನಲ್ಲಿಯೂ ಅಶಾಂತಿ ಬೆಳೆಯುತ್ತದೆ. ಕೊನೆಗೆ ಪೋಸ್ಟಾಫೀಸೇ ಮುಚ್ಚಿಹೋಗುತ್ತದೆ. (ತೇಜಸ್ವಿ ಕಥನ, ಪು-೫೩, ಮೊದಲನೇ ಮುದ್ರಣ ೨೦೦೪, ಅಕ್ಷರ ಪ್ರಕಾಶನ, ಲೇ. ಟಿ.ಪಿ. ಅಶೋಕ)

ಆಧುನಿಕತೆಯು ತನ್ನ ಪಾಡಿಗೆ ತಾನಿದ್ದ ಹಳ್ಳಿಯೊಳಗೆ ಪ್ರವೇಶಿಸಿ, ಬೋಬಣ್ಣನೆಂಬ ಮುಗ್ಧನ ಮನಃ ಪರಿವರ್ತಿಸಿ, ಆತನ ಕುಟುಂಬದ ನೆಮ್ಮದಿ ಹಾಳಾಗಿ, ಜೊತೆಗೆ ಅಬಚೂರಿನ ಸಂಸ್ಕೃತಿಯೇ ಹದಗೆಡುತ್ತದೆ. ಇದು ತೇಜಸ್ವಿಯವರ ದೃಷ್ಟಿ ವ್ಯಷ್ಟಿ ನೆಲೆಯಿಂದ ಸಮಷ್ಟಿ ನೆಲೆಗೆ ಚಿಂತನೆ ವ್ಯಾಪಿಸಿರುವುದನ್ನು ಸೂಚಿಸುತ್ತದೆ. ಕೊನೆಗೆ ಅಬಚೂರಿನಲ್ಲಿ ಪೋಸ್ಟಾಫೀಸು ಮುಚ್ಚಿಹೋಗುತ್ತದೆ. ಪೋಸ್ಟಾಫೀಸು ಮುಚ್ಚಿ ಹೋಗುವ ಕ್ರಮವನ್ನು ನಾವು ಆಧುನೀಕರಣವನ್ನು ತಿರಸ್ಕರಿಬೇಕೆಂಬ ಆಶಯವಿರಬಹುದೇ ಎಂಬುದನ್ನು ಯೋಚಿಸ ಬೇಕಾಗಿದೆ. ಮಾಯಾಲೋಕ ಕಾದಂಬರಿಯಲ್ಲಿ ಬರುವ ಸಾಮಾಜಿಕ ಪರಿಸರವು

ಮಹತ್ವದಾಗಿದೆ. ಇಲ್ಲಿನ ಪಾತ್ರಗಳು, ವೈವಿಧ್ಯಮಯ ಜೀವನ ಕ್ರಮ ಇವುಗಳನ್ನು ಗಮನಿಸಿದರೆ ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯು ನೆನಪಾಗುತ್ತದೆ.

ಇಲ್ಲಿ ಯಾರು ಮುಖ್ಯರಲ್ಲ;
ಯಾರು ಅಮುಖ್ಯರಲ್ಲ;
ಯಾವುದು ಯಕಃಶ್ಚಿತವಲ್ಲ !
ಇಲ್ಲಿ ಎಲ್ಲಕ್ಕೂ ಇದೆ ಅರ್ಥ;
ಯಾವುದು ಅಲ್ಲ ವ್ಯರ್ಥ;
ನೀರೆಲ್ಲ ಊ ತೀರ್ಥ!

ಕುವೆಂಪುರವರ ಈ ವಿಶಾಲ ದೃಷ್ಟಿಕೋನ, ದರ್ಶನ ಪ್ರಜ್ಞೆಯ ಕಾರಣದಿಂದ ಮಲೆಗಳಲ್ಲಿ ಮದುಮಗಳು ಕಾದಂಬರಿಯನ್ನು ನಾವು ಮಲೆನಾಡಿನ ಸಾಂಸ್ಕೃತಿಕ ಪಠ್ಯವಾಗಿ ಓದಬಹುದು. ಅದೇ ರೀತಿಯಾಗಿ ಮಾಯಾಲೋಕ ಕಾದಂಬರಿಯೂ ಸಹ ತೇಜಸ್ವಿಯವರ ಸೂಕ್ಷ್ಮ ದೃಷ್ಟಿಯ ಪರಿಣಾಮವಾಗಿ ಸಾಂಸ್ಕೃತಿಕವಾಗಿ ಮುಖ್ಯವೆನಿಸುತ್ತದೆ.

ಮಾಯಾಲೋಕ ಕಾದಂಬರಿಯಲ್ಲಿ ಯಾವುದು ಕೇಂದ್ರವಲ್ಲ, ಯಾವುದು ಅಮುಖ್ಯವಲ್ಲ, ಸಾಮಾಜಿಕ ಜನಜೀವನದಲ್ಲಿ ಕಂಡುಬರುವ ಸೂಕ್ಷ್ಮಾತಿಸೂಕ್ಷ್ಮ ಪಾತ್ರಗಳನ್ನು 'ಮಾಯಾಲೋಕ'ದಲ್ಲಿ ಕಾಣಿಸಿದ್ದಾರೆ. ಆದ್ದರಿಂದಲೇ ಅದು 'ಮಾಯಾಲೋಕ' ವೆನಿಸಿದೆ ಎಂದರೆ ತಪ್ಪಾಗಲಾರದು.

ಮಾಯಾಲೋಕ ಕಾದಂಬರಿಯಲ್ಲಿ ವಡ್ಡರು, ಮುಸ್ಲಿಮರು, ಲಂಬಾಣಿಯವರು, ಬೋವಿಗಳು, ಬುಡಬುಡಿಕೆಯವರು, ಹೀಗೆ ನಾನಾ ಸಮುದಾಯಗಳನ್ನು ತಮ್ಮ ಮಾಯಾಲೋಕದಲ್ಲಿ ತಂದಿರುವ ತೇಜಸ್ವಿಯವರು ಸಂಸ್ಕೃತಿಯನ್ನು ಗ್ರಹಿಸುವ ದೃಷ್ಟಿಕೋನ ವೇದ್ಯವಾಗುತ್ತದೆ. ಸಣ್ಣ ಸಣ್ಣ ಘಟನೆಗಳು ಸಹ ಹೀಗೆ ಜನಜೀವನದ ಮೇಲೆ ಘೋರ ಪರಿಣಾಮಗಳನ್ನು ಬೀರುತ್ತವೆ ಎಂದು ತೇಜಸ್ವಿ ಮಾಯಾಲೋಕ ಕಾದಂಬರಿಯಲ್ಲಿ ಚರ್ಚಿಸಿದ್ದಾರೆ.

'ಮುಷ್ಕರ, ಬಂದ್, ಪ್ರತಿಬಂಧಕಾಜ್ಞೆ, ಪ್ರತಿಭಟನೆ, ಪೋಲಿಸು ಪಹರೆ ಇವೆಲ್ಲಾ ಗೊಂದಲಗೇರಿಯಂತಹ ಪುಟ್ಟ ಊರಿನ ಆಗುಹೋಗುಗಳಲ್ಲಿ ದೈನಂದಿನ ವ್ಯವಹಾರದಂತಾಗಿ ಜನರಿಗಂತೂ ರೇಜಿಗೆ ಹುಟ್ಟಿಹೋಗಿತ್ತು. ಬ್ಯಾಂಕ್ ನೌಕರರ ಮುಷ್ಕರ,

ಆದಾದ ಮೇಲೆ ಟ್ರಾನ್ಸ್‌ಪೋರ್ಟ್ ಲಾರಿಯವರ ಮುಷ್ಕರ ಅವರದ್ದು ಆದ ಮೇಲೆ ಟೆಲಿಫೋನ್ ಡಿಪಾರ್ಟ್‌ಮೆಂಟಿನವರ ಒಂದು ದಿನದ ಸಾಂಕೇತಿಕ ಮುಷ್ಕರ ಇವರದ್ದೆಲ್ಲಾ ಮುಗಿದ ಮೇಲೆ ರಾಜಕೀಯ ಪಕ್ಷಗಳು ತಮ್ಮ ತೆವಲಿಗೆ ಕರೆಕೊಡುವ ಬಂದ್‌ಗಳು, ಇವೆಲ್ಲಾ ಹದ್ದುಮೀರದ ಹಾಗೆ ನೋಡಿಕೊಳ್ಳಲು ಯಾವಾಗಲೂ ಒಂದು ಬಸ್ ಭರ್ತಿ ರಿಸರ್ವ್ ಪೋಲಿಸರು ಗೊಂದಲಗೇರಿ ಚೌಕದಲ್ಲಿ ಯಾವ ಸಂದರ್ಭದಲ್ಲಾದರೂ ಗಲಾಟೆ ಭುಗಿಲೇಳುವುದನ್ನು ನಿರೀಕ್ಷಿಸುತ್ತಾ ನಿಂತಿರುವುದು, ಇಲ್ಲಿ ಕಾಣುವ ಸರ್ವೇಸಾಮಾನ್ಯ ದೃಶ್ಯ, ಸ್ಕೂಲ್ ಪರೀಕ್ಷೆಗಳಿಗೆ ಸಹ ಈಗ ಪೋಲಿಸ್ ಕಾವಲು, ರಂಜಾನ್, ಗೌರಿಗಣೇಶ, ದೀಪಾವಳಿ, ಮೊಹರಮ್, ಇತ್ಯಾದಿ ಹಬ್ಬಗಳಿಗೂ ಊರಿನ ರಸ್ತೆಗಳಲ್ಲಿ ಪೋಲಿಸ್ ಬೀಟು (ಮಾಯಾಲೋಕ-೧, ಪು ೨೧೪, ಪು. ಪುಸ್ತಕ ಪ್ರಕಾಶನ, ಮೊದಲನೇ ಮುದ್ರಣ ೨೦೦೬, ಲೇ. ಪೂರ್ಣಚಂದ್ರ ತೇಜಸ್ವಿ)

ಮಾಯಾಲೋಕ ಕಾದಂಬರಿಯ ಗೊಂದಲಗೇರಿ ಎಂಬ ಅರೆನಗರದಲ್ಲಿ ಕಂಡುಬರುತ್ತಿರುವ ಸಮಾಜದ ಚಿತ್ರಣವು ಸ್ವಾಸ್ಥ್ಯ ಕಳೆದುಕೊಳ್ಳುತ್ತಿರುವ ಸಮಾಜವನ್ನು ಪ್ರತಿಬಿಂಬಿಸುತ್ತದೆ. ಗೊಂದಲಗೇರಿ ಎಂಬುದೇ ಒಂದು ಪ್ರತಿಮೆ. ಹಲವಾರು ಗೊಂದಲಗಳನ್ನು ತನ್ನೊಳಗೆ ಕೇಂದ್ರೀಕರಿಸಿಕೊಂಡು ನಿಂತಿರುವ ಅರೆನಗರ, ಗೊಂದಲಗೇರಿ ಎಂಬುದು ಕೇವಲ ಗೊಂದಲಗೇರಿಯ ಪರಿಸ್ಥಿತಿಯನ್ನು ವರ್ಣಿಸದೆ ಭಾರತದ ಇಂದಿನ ಪರಿಸ್ಥಿತಿಗೆ ಹೋಲಿಕೆ ಮಾಡುತ್ತಾ ದೇಶಿಪ್ರಜ್ಞೆಯಿಂದ ವ್ಯಾಪಕತೆಯನ್ನು ಪಡೆದುಕೊಳ್ಳುವುದನ್ನು ಕಾಣಬಹುದು. ಇಂತಹುದೇ ಪರಿಸ್ಥಿತಿ ಚಿದಂಬರ ರಹಸ್ಯ ಕಾದಂಬರಿಯಲ್ಲಿ ಕಂಡುಬರುತ್ತದೆ. ಚಿದಂಬರ ರಹಸ್ಯದಲ್ಲಿ ಬರುವ ಕೆಸರೂರು ಸಹ ಒಂದು ಪ್ರತಿಮೆಯಾಗಿ ಕಂಡುಬರುತ್ತದೆ. ಏಲಕ್ಕಿ ಸಂಶೋಧನಾ ಕೇಂದ್ರಕ್ಕೆ ಸ್ಥಳೀಯ ರಾಜಕೀಯವು ಬೆರೆತು ಮುಸ್ಲಿಮರು ನಮಾಜ್ ಮಾಡುವುದು, ಅವರು ಮಸೀದಿ ಕಟ್ಟಿ ನಮಾಜ್ ಆರಂಭಿಸಿದ ದಿನದಿಂದ ಹಿಂದೂಗಳು ಕನ್ನಡಿಗರು, ಲಿಂಗಾಯಿತರು, ಒಕ್ಕಲಿಗರು ಸೇರಿ ಸಂಶೋಧನ ಕೇಂದ್ರದೊಳಗೆ ಇರುವ ಮುರುಕಲು ಗುಡಿಗೆ ಉದ್ಭವ ವೆಂಕಟೇಶ್ವರಸ್ವಾಮಿ ಅಂತ ನಾಮಕರಣ ಮಾಡಿದರು. ಮುಸ್ಲಿಮರ ಅಹಂ ಅನ್ನು ಅಡಗಿಸುತ್ತೇವೆ ಅಂತ ಮೈಕ್ ಹಾಕಿಕೊಂಡು ಜಗನ್ನಾಥ ಸ್ತೋತ್ರ, ವೆಂಕಟೇಶ್ವರ ಸ್ತೋತ್ರ ಕೂಗಿಸೋದಕ್ಕೆ ಸಂಶೋಧನ ಕೇಂದ್ರದ ನಿರ್ದೇಶಕ ಜೋಗಿಹಾಳರ ಅಸಮ್ಮತಿಯ ನಡುವೆಯೇ ಪ್ರಾರಂಭಿಸಿದರು. ಸ್ಥಳೀಯ ರಾಜಕೀಯವು ಜೋಗಿಹಾಳರನ್ನು ವರ್ಗಾವಣೆ

ಮಾಡಬೇಕೆಂದು ತನ್ನ ಹಠ ತೊಟ್ಟಿದ್ದು ಈ ಎಲ್ಲಾ ಘಟನೆಗಳನ್ನು ಗಮನಿಸಿದಾಗ ಕೆಸರೂರಿನ 'ಸಾಂಸ್ಕೃತಿಕ' ವಾತಾವರಣ ಹದಗೆಟ್ಟಿರುವುದು ಮೇಲುನೋಟಕ್ಕೆ ಕಂಡುಬರುತ್ತದೆ.

ಕೆಸರೂರು, ಗೊಂದಲಗೇರಿ, ಜುಗಾರಿ ಕ್ರಾಸ್ ಎಂಬುದು ಸ್ಥಳನಾಮಗಳಾದರು ತಮ್ಮೊಳಗೆ ಅಡಗಿಸಿಕೊಂಡಿರುವ ಗೊಂದಲಗಳಿಂದ ನಮ್ಮ ಭಾರತದ ಪರಿಸ್ಥಿತಿಯನ್ನು ಪ್ರತಿನಿಧಿಸುತ್ತವೆ.

'ಕೆಸರೂರಿನ ಏಲಕ್ಕಿಗೆ ಕೆಸರೂರಿನ ಸಂಸ್ಕೃತಿಗೆ ಒಟ್ಟಿಗೆ ರೋಗ ತಗುಲಿಕೊಂಡಿದೆ ಎಂದು ಪಾಟೀಲರು ಹೇಳುವ ಮಾತುಗಳಿಂದ ಪ್ರಕೃತಿ ಮತ್ತು ಸಂಸ್ಕೃತಿ ಭಿನ್ನವಲ್ಲ, ಎರಡು ಒಟ್ಟೊಟ್ಟಿಗೆ ಸಾಗುತ್ತವೇ ಎಂಬುದನ್ನೂ ಅರ್ಥೈಸಿಕೊಳ್ಳಬಹುದು.

'ಕೆಸರೂರಿನ ಏಲಕ್ಕಿ ಸಮಸ್ಯೆಯನ್ನು ಇಡೀ ಕೆಸರೂರಿನ ಸಂಸ್ಕೃತಿಯೊಂದಿಗೆ ಅರ್ಥ ಮಾಡಿಕೊಳ್ಳಬೇಕೆ?'' ಈ ಸಾವಿರಾರು ಸಮಸ್ಯೆಗಳ ತಳಕ್ಕೆ ಮುಳುಗಿ ಇದರ ಮೂಲ ಸಮಸ್ಯೆ ಏನೆಂದು ನೋಡಲಿಕ್ಕೆ ನಾನೇನು ಅವತಾರಪುರುಷನೆ?'' (ಚಿದಂಬರ ರಹಸ್ಯ, ಪು-೫೨, ೮ನೇ ಮುದ್ರಣ ೨೦೦೪, ಲೇ. ಪೂರ್ಣಚಂದ್ರತೇಜಸ್ವಿ)

ಏಲಕ್ಕಿ ಸಮಸ್ಯೆಯು ಹೇಗೆ ಒಂದು ಊರಿನ ಸಂಸ್ಕೃತಿಯೊಂದಿಗೆ ಬೆಸೆದುಕೊಂಡಿದೆ ಮತ್ತು ಅಲ್ಲಿರುವ ಸಮಸ್ಯೆಗಳು ತುಂಬಾ ವ್ಯಾಪ್ತಿಯುಳ್ಳವು ಎಂದು ಅಂಗಾಡಿ ಆತಂಕ ವ್ಯಕ್ತಪಡಿಸುತ್ತಿರುವುದರ ಮೂಲಕ ತೇಜಸ್ವಿ ಇಡೀ ಸಾಮಾಜಿಕ ಸಮಸ್ಯೆಯನ್ನು ವಿಶ್ಲೇಷಿಸುತ್ತಿರುವಂತೆ ಕಂಡುಬರುತ್ತದೆ.

ಕೆಸರೂರು, ಗೊಂದಲಗೇರಿ, ಜುಗಾರಿಕ್ರಾಸ್ ಇವುಗಳ ಮುಖಾಂತರ ಭಾರತದ ಗೋಜಲುಮಯ ಪರಿಸ್ಥಿತಿಯನ್ನು ಬಿಂಬಿಸುತ್ತಿರುವ ತೇಜಸ್ವಿಯವರು 'ಯಾರು ಕಾಣದ ಭಾರತವನ್ನು ಕಾಣುತ್ತಾರೆ, ಶೋಧಿಸುತ್ತಾರೆ.'

ನೆಹರೂರವರ 'ಡಿಸ್ಕವರಿ ಆಫ್ ಇಂಡಿಯಾ' ರಾಜಕೀಯವಾಗಿ ಮುಖ್ಯವೆನಿಸಿದರೆ ತೇಜಸ್ವಿ ಕಂಡಂತಹ ಭಾರತ ಸಾಂಸ್ಕೃತಿಕವಾಗಿ ಮುಖ್ಯವೆನಿಸುತ್ತದೆ. ಈ ಕಾಣುವಿಕೆಯ ಹಿಂದೆ ತೇಜಸ್ವಿರವರ ದಾರ್ಶನಿಕ ಹುಡುಕಾಟದ ಪ್ರಜ್ಞೆ ಇದೆ. ಆದುದರಿಂದಲೇ ಮಂದಣ್ಣನನ್ನು ಪರಿಸರ ವಿಜ್ಞಾನಿ ಕರ್ವಾಲೋರೊಂದಿಗೆ ಸಮೀಕರಿಸಲು ಸಾಧ್ಯವಾಗಿದೆ. ಮತ್ತು ಚೀಂಕ್ರಮೇಸ್ತ್ರಿಯನ್ನು ಅರಿಸ್ಟಾಟಲ್ ಎಂಬ ದಾರ್ಶನಿಕನೊಂದಿಗೆ ಮುಖಾಮುಖಿಯಾಗಿಸಲು ಸಾಧ್ಯವಾಗುತ್ತದೆ.

ಮಂದಣ್ಣ ಮತ್ತು ಚೀಂಕ್ರಮೇಸ್ತ್ರಿ ದೇಸಿಯತೆಯ ಪ್ರತೀಕವಾಗಿ ಕಂಡುಬರುತ್ತಾರೆ. ತಮ್ಮ ಚಿಂತನೆಗಳಿಂದಲೇ ವಿಶಿಷ್ಟವೆನಿಸಿಕೊಳ್ಳುತ್ತಾರೆ. ಇಲ್ಲಿ ಕರ್ವಾಲೋನ ಸಂಶೋಧನೆಗೆ ಸಹಾಯ ಮಾಡುವ ಮಂದಣ್ಣ, ಪ್ರತಿಸಂಸ್ಕೃತಿಯ ದ್ಯೋತಕವಾಗಿ ಕಂಡುಬರುತ್ತಾನೆ. ಪ್ರಧಾನ ಸಂಸ್ಕೃತಿಯ ವಿಚಾರಧಾರೆಗಳಿಗೆ ತನ್ನನ್ನು ಅಧೀನ ಮಾಡಿಕೊಳ್ಳದೆ ಪ್ರಕೃತಿಯನ್ನು ಕಾಣುವ ದರ್ಶನ ಪ್ರಜ್ಞೆಯನ್ನು ಮಂದಣ್ಣ ರೂಢಿಸಿಕೊಳ್ಳದೆ ಅದು ಹುಟ್ಟಿನಿಂದಲೇ ಬಂದುದಾಗಿದೆ. ಆತ ಹುಟ್ಟಾ ನ್ಯಾಚುರಲಿಸ್ಟ್ ಆಗಿ ಕಾದಂಬರಿಯಲ್ಲಿ ಕಂಡುಬಂದಿದ್ದಾನೆ.

'ಮುದಿಯಾದ ಸಂಸ್ಕೃತಿಯ ಕೆಸರೂರಿನ ಮನೆಮನೆಯೊಳಗಿನ ಎಳೆಯರ ತುಮುಲವಿರಬಹುದು ಇದು. ವಿವೇಚನೆಗಳನ್ನು ಎಳೆಯ ಜೀವಗಳಿಗೆ ಧಾರೆಯೆರೆಂದು ಅದರೊಂದಿಗೆ ಅವರು ವಿಕಾಸಗೊಳ್ಳಲನುವು ಮಾಡಿಕೊಳ್ಳುವುದರ ಬದಲು ಶಾಸ್ತ್ರ ಆಚಾರದ ನೀತಿ ನಿಯಮಗಳ ಅದೃಶ್ಯ ಜಾಲದಲ್ಲಿ ಅವರನ್ನು ಸಿಲುಕಿಸಿ ಅದಕ್ಕೆ ಅವರು ವಿಧೇಯರಾಗಿರುವಂತೆ ಮಾಡಲು ತಾವು ಅದನ್ನೇ ನಂಬಿ, ತಮ್ಮ ತಾರುಣ್ಯವನ್ನು ಹಾಳು ಮಾಡಿಕೊಂಡ ಮುದಿಯರೆಲ್ಲಾ ಎಳೆ ಹೃದಯದೊಳಹೊಕ್ಕು ಪರಕಾಯ ಪ್ರವೇಶ ಮಾಡಲು ಹವಣಿಸುತ್ತಾ ಕೆಸರೂರನ್ನೇ ಒಂದು ಬೆಂತರಲೋಕ ಮಾಡಿದ್ದರು. ಮೇಲೆ ಏನು ಸಂಭವಿಸದಂತೆ ನಟಿಸುತ್ತಾ, ಬಸ್ಸು ಕಾಯುವವರು ಬಸ್ಸು ಕಾಯುತ್ತಿದ್ದರು, ಕಾರ ಕಡೆಯುವವರು ಕಾರ ಕಡೆಯುತ್ತಿದ್ದರು. ಗದ್ದೆ ಉಳುತ್ತಾ ಮಳೆ ಬರಲಿಲ್ಲವೆಂದು ಗೊಣಗುವವರು ಗೊಣಗುತ್ತಾ ಇದ್ದರು. ಆದರೆ ಜ್ವಾಲಾಮುಖಿಯೊಂದು ಒಳಗೆ ಭಯಂಕರ ಒತ್ತಡ ನಿರ್ಮಿಸುತ್ತಿತ್ತು. (ಚಿದಂಬರ ರಹಸ್ಯ, ಪು-೮೪, ಪ್ರ. ಪು. ಪ್ರಕಾಶನ, ೮ನೇ ಮುದ್ರಣ ೨೦೦೪, ಲೇ. ಪೂರ್ಣಚಂದ್ರ ತೇಜಸ್ವಿ)

ಒಂದು ಕಾಲಘಟ್ಟದ ಸಂಸ್ಕೃತಿಯ ಮೌಲ್ಯಗಳು ಕಾಲದ ಅಂತರದಲ್ಲಿ ಪಲ್ಲಟಗೊಳ್ಳುತ್ತವೆ. ಈ ಪಲ್ಲಟಗಳನ್ನು ಹಿರಿಯ ಪೀಳಿಗೆ ಒಪ್ಪುವುದಿಲ್ಲ. ಕಿರಿಯ ಪೀಳಿಗೆಯೂ ತಾವು ಶಾಸ್ತ್ರ, ಸಂಪ್ರದಾಯ, ಆಚಾರಗಳನ್ನು ಪಾಲಿಸಿದಂತೆ ಕಿರಿಯ ಪೀಳಿಗೆ ಅದನ್ನೇ ಪಾಲಿಸಬೇಕೆಂದು ಒತ್ತಡ ಹೇರಿ 'ಸರಹದ್ದು' ಗಳನ್ನು ಹಿರಿಯ ಪೀಳಿಗೆ ನಿರ್ಮಾಣ ಮಾಡುತ್ತಿತ್ತು. ಅಂತಹ ಸರಹದ್ದುಗಳನ್ನು ಮೀರಲು ಜಯಂತಿ, ರಫಿ, ರಮೇಶ, ಚಂದ್ರ, ರಾಮಪ್ಪ, ಅಂಗಾರ ಕಿರಿಯ ಪೀಳಿಗೆಯ ಎಲ್ಲರೂ ಪ್ರಯತ್ನ ಪಟ್ಟು, ಕೆಸರೂರಿನ ಸಂಸ್ಕೃತಿಗೆ ಅಂಟಿಕೊಂಡಿದ್ದ ರೋಗವನ್ನು ನಿರ್ಮೂಲನೆ ಮಾಡಲು 'ಕ್ರಾಂತಿಯಾಗಬೇಕು' ಎಂಬ ತೀರ್ಮಾನಕ್ಕೆ ಯುವ ಜನರು ಬಂದಿರುವುದು, ನಮ್ಮ ಸಂಪ್ರದಾಯಸ್ಥ ರೋಗಗ್ರಸ್ಥ

ಭಾರತವನ್ನು ಯುವಪೀಳಿಗೆಯ ಮುಖಾಂತರ ತೇಜಸ್ವಿ ಪರಿವರ್ತಿಸಲು ಹವಣಿಸುತ್ತಿರುವುದು ಇವರಿಂದ ವೇದ್ಯವಾಗುತ್ತದೆ. ಇದೇ ರೀತಿಯಾಗಿ ಹುಲಿಯೂರಿನ ಸರಹದ್ದು ಕತೆಯ ನಾಯಕ ಸೋಮು ಸಂಪ್ರದಾಯಕತೆಯ ರೋಗಗ್ರಸ್ಥ ಬಂಧನದಿಂದ ಮುಕ್ತನಾಗಲು, ಮತ್ತು ತಂದೆಯ ಹಿಡಿತದಿಂದ, ಜಾತಿಯ ಹಿಡಿತದಿಂದ ತಪ್ಪಿಸಿಕೊಂಡು ಬರಲು ಹವಣಿಸುತ್ತಿರುವುದು ಕಂಡುಬರುತ್ತದೆ. ' ಈ ತಾಯ್ಗ್ಗಂಡ ಮುಂಡೇವಕ್ಕೆಲ್ಲಾ ದೇವರಂತೆ. 'ದನಾ ತಿನ್ನೋರಿಗೆ ಗೊಬ್ಬರದಾಣೆ'. ಯಾವುದೇ ಜಾತಿ ಹುಡುಗೀನ ಮದುವೆಯಾದೇನು ಅಂತ ಜಾತಿ ಕುಲ ತೊರೆದೋರಿಗೆ ಇನ್ನು ದೇವ್ರ ದಿಂಡ್ರು'' (ಹುಲಿಯೂರಿನ ಸರಹದ್ದು, ಪು-೩೫, ೪ನೇ ಮುದ್ರಣ, ೨೦೦೪.ಲೇ.ಪೂರ್ಣಚಂದ್ರ ತೇಜಸ್ವಿ) ಎಂದು ಸೋಮುವಿನ ತಂದೆ ಬಯ್ಯುತ್ತಾನೆ. ಆರಂಭದಲ್ಲಿ ಗರುಡನ ಬಗ್ಗೆ ನಂಬಿಕೆ, ಶ್ರದ್ಧೆ ಇರುವ ಸೋಮುವಿಗೆ ತಂದೆ ಅದನ್ನು ಕೊಲ್ಲಲು ಹೇಳಿದಾಗ ಅಪಾರ ಸಿಟ್ಟುಬರುತ್ತದೆ. ಯಾವುದೇ ಒಂದು ಸಂಸ್ಕೃತಿಯಲ್ಲಿ ಪೀಳಿಗೆ, ಪೀಳಿಗೆಗಳ ನಡುವೆ ಸಂಘರ್ಷಗಳು ಸಾಮಾನ್ಯ ಒಂದು ಪೀಳಿಗೆಯ ಪ್ರಕಾರ ಸಂಸ್ಕೃತಿ, ಸಂಪ್ರದಾಯ ಎಂದು ಮಾನ್ಯ ಮಾಡಲಾದ ಸಂಗತಿಗಳು ಮತ್ತೊಂದು ಪೀಳಿಗೆಯ ಕಾಲಕ್ಕೆ ನಗಣ್ಯವಾಗುವುದು ಸಾಮಾನ್ಯ. ಇಂತಹ ಸಂಸ್ಕೃತಿಯ ಪಲ್ಲಟಗಳನ್ನು ತೇಜಸ್ವಿ ಕಾದಂಬರಿಗಳು ತೆರೆದಿಡುತ್ತವೆ. ಅನ್ಯಜಾತಿಯ ಹುಡುಗಿಯನ್ನೇ ತನ್ನಿಚ್ಛೆಯಂತೆ ಮದುವೆಯಾಗಲು ಹೊರಟಿರುವ ಸೋಮು, ರಫಿಯನ್ನೇ, ಪ್ರೀತಿಸಿ ಆತನೊಂದಿಗೆ ಹೋಗಲು ಸಿದ್ಧವಾಗಿರುವ ಜಯಂತಿ, ಭಾರತದ ಜಾತಿ ಪದ್ಧತಿಯನ್ನು ಮೀರುವ ಹವಣಿಕೆಯಲ್ಲಿದ್ದಾರೆ. ಅದೇ ರೀತಿ ಜಯಂತಿಯ ತಂದೆಯಾದ ಕೃಷ್ಣೇಗೌಡ ಮತ್ತು ಸೋಮುವಿನ ತಂದೆ ಸಾಂಪ್ರದಾಯಿಕ, ಜಡ್ಡುಗಟ್ಟಿದ ಜಗತ್ತಿನ ಪ್ರತಿನಿಧಿಗಳಾಗಿದ್ದಾರೆ.

'ನಿಗೂಢ ಮನುಷ್ಯರು' ಕಾದಂಬರಿಯಲ್ಲಿ ಬರುವ ಪಾತ್ರಗಳಾದ ಮರಸರ, ಕಾಂಪ್ರ ಬೇರೊಂದು ಲೋಕದ ಆದಿಮಾನವರಂತೆ ಕಂಡುಬರುತ್ತಾರೆ. ಮರಸರ ಆದಿಮಾನವನಂತೆ ಕಪಿಗಳನ್ನು ತಿನ್ನುವುದು, ಅವುಗಳ ತಲೆ ಬುರುಡೆಯನ್ನು ಗುಡಿಸಲಿಗೆ ನೇತು ಹಾಕುವುದು, ಮಗನ ಹೆಣವನ್ನು ಮಣ್ಣು ಮಾಡದೆ ಎಸೆಯುವುದು, ಹೆಣದ ಒಳಗೆ ಪಟಾಸನ್ನು ಅಡಗಿಸಿಟ್ಟು ಹಂದಿ ಬೇಟೆಯಾಡಲು ಯೋಜನೆ ಹಾಕುವುದು, ಇಂತಹ ಅಮಾನವೀಯ ಕ್ರೌರ್ಯಗಳಲ್ಲಿ ಮರಸರ ತೊಡಗಿರುತ್ತಾನೆ. ಈ ಪಾತ್ರಗಳನ್ನು ಬಿಂಬಿಸುವುದರ ಮುಖಾಂತರ ತೇಜಸ್ವಿಯವರು ಅಂಚಿನ ಪಾತ್ರಗಳ ಜೀವನ ಕ್ರಮವನ್ನು, ಮತ್ತೊಂದು ಸಂಸ್ಕೃತಿಯನ್ನು ತೆರೆದಿಡಲು ಯತ್ನಿಸಿದ್ದಾರೆ.

ತೇಜಸ್ವಿಯವರ ಸಣ್ಣ ಕತೆಗಳಾದ 'ಅವನತಿ', 'ಕುಬಿ ಮತ್ತು ಇಯಾಲ', 'ತುಕ್ಕೋಜಿ', 'ಡೇರ್ ಡೆವಿಲ್ ಮುಸ್ತಫಾ', 'ತಬರನ ಕಥೆ', 'ತ್ಯಕ್ತ' ಈ ಎಲ್ಲಾ ಕಥೆಗಳು ನವ್ಯದ ಸಂಕೀರ್ಣತೆಯಿಂದ ಪಾರಾಗಿ ಓದುಗನ ಅನುಭವ ಲೋಕದೊಳಗೆ ಪ್ರವೇಶಿಸುತ್ತವೆ ಮತ್ತು ಸಾಂಸ್ಕೃತಿಕ ಲೋಕದ ತಲ್ಲಣಗಳನ್ನು ಬಿಚ್ಚಿಟ್ಟು ಸಮಾಜಮುಖಿ ಚಿಂತನೆಯ ಕಡೆಗೆ ಓದುಗರನ್ನು ಕೊಂಡೊಯ್ಯುವುದರಲ್ಲಿ ಯಶಸ್ವಿಯಾಗುತ್ತದೆ.

ಸಾಮಾಜಿಕ ಜೀವನದಲ್ಲಿ ಹಲವಾರು ವಿರೋಧಾಭಾಸಗಳು ಅಸ್ತಿತ್ವದಲ್ಲಿರುತ್ತವೆ ಎಂದು ತೇಜಸ್ವಿ ವ್ಯಕ್ತಿವಿಶಿಷ್ಟವಾದಿ ಸಿದ್ಧಾಂತದಲ್ಲಿ ನಿರೂಪಿಸಿದ್ದಾರೆ. ಪತ್ರಿಕೆಯಲ್ಲಿ ಭೌತಶಾಸ್ತ್ರದ ಪುಟ ತಿರುವಿದರೆ ವಾರ ಭವಿಷ್ಯದ ಪುಟವಿರುತ್ತದೆ. ಕ್ರಾಪಿನ ಹಿಂದೆ ಜುಟ್ಟು, ಪರಸ್ಪರ ವಿರುದ್ಧವಾದವುಗಳು ಇವು ಸಾಮಾಜಿಕ ಪರಿಸರದಲ್ಲಿ ಅಸ್ತಿತ್ವದಲ್ಲಿರುತ್ತದೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ಬರುವ ಸಂಶೋಧನ ಕೇಂದ್ರದ ನಿರ್ದೇಶಕರಾದಂತಹ ಪಾಟೀಲರನ್ನು ಕೆಸರೂರಿನ ಜನ ಮಾಟ, ಮಂತ್ರ ಮಾಡುತ್ತಾರೆ ಎಂದು ನಂಬುವುದು ನಮ್ಮ ಸಮಾಜದಲ್ಲಿ ಏಕಕಾಲದಲ್ಲಿ ವಿರೋಧಾಭಾಸಗಳು ಅಸ್ತಿತ್ವದಲ್ಲಿದೆ ಎಂಬುದನ್ನು ತೋರಿಸಿಕೊಡುತ್ತದೆ. ವೈಜ್ಞಾನಿಕತೆ ಮತ್ತು ಮೂಢನಂಬಿಕೆಗಳು ಪರಸ್ಪರ ಘರ್ಷಣೆಗೆ ಒಳಗಾಗುವ ಸನ್ನಿವೇಶವು ಇಲ್ಲಿ ಮಹತ್ವ ಪಡೆದಿದೆ.

ಕರ್ವಾಲೊ ಕಾದಂಬರಿಯಲ್ಲಿ ಹಾರುವ ಓತಿಯನ್ನು ಶೋಧಿಸಲು ಕಾಡಿನಲ್ಲಿ ಸಂಚರಿಸಲು ಚಕ್ಕಡಿ ಗಾಡಿಯನ್ನು ಬಳಸಿಕೊಳ್ಳಲು ತೀರ್ಮಾನಿಸುತ್ತಾರೆ. ಈ ಚಕ್ಕಡಿ ಗಾಡಿಯನ್ನು ಬಳಸುವುದು ಸುಲಭವಾಗಿತ್ತು. ಚಕ್ಕಡಿ ಗಾಡಿಯು ಇಲ್ಲಿ ದೇಸಿಯತೆಯ ಪ್ರತೀಕವಾಗಿ ಕಂಡುಬಂದಿದೆ. ಆಧುನಿಕತೆಯ ಸಂಕೇತವಾದ ಜೀಪು ಕಾಡಿನಲ್ಲಿ ಉಪಯೋಗಕ್ಕೆ ಬರುವುದಿಲ್ಲ ಎಂಬುದನ್ನು ಈ ಸಂಗತಿ ಧ್ವನಿಸುತ್ತದೆ. ಚಕ್ಕಡಿಗಾಡಿಯು ಆಧುನಿಕತೆಗೆ ದೇಸಿಯತೆಯು ತೋರಿದ ಪ್ರತಿರೋಧವಾಗಿದೆ.

***ಕಾಲದ ಅಂತರದಲ್ಲಿ ಹೊಸ ದಿಗಂತದೆಡೆಗೆ ಸಾಗುವ ತೇಜಸ್ವಿ ಕಾದಂಬರಿಗಳು :***

ದೀರ್ಘಕಾಲ ಸಾಹಿತ್ಯ ಕೃಷಿಯಲ್ಲಿ ತೊಡಗಿದ ಲೇಖಕನ ಸಾಹಿತ್ಯ ಹಲವಾರು ವೈರುಧ್ಯಗಳಿಗೆ, ಪಲ್ಲಟಗಳಿಗೆ ಒಳಗಾಗುವುದು ವಿಶೇಷ. ದೀರ್ಘಕಾಲದವರೆಗೂ ತನ್ನ ಸಾಹಿತ್ಯದಲ್ಲಿ ಮಾನವೀಯ ನೆಲೆಯಲ್ಲಿ ಸಮಾಜವನ್ನು ಕಾಣುತ್ತಾ ಅಲ್ಲಿನ ಆಗುಹೋಗು ಗಳನ್ನು ತನ್ನ ಸಾಹಿತ್ಯ ಕೃಷಿಯಲ್ಲಿ ಪ್ರತಿಬಿಂಬಿಸುವ ಲೇಖಕ ಸಾಂಸ್ಕೃತಿಕ ಅನನ್ಯತೆಯ ಪ್ರತೀಕವಾಗುತ್ತಾನೆ.

ಕಾಲವು ಬದಲಾದಂತೆ ಸಮಾಜದ ಅಪೇಕ್ಷೆಗಳು ಬದಲಾಗತೊಡಗುತ್ತವೆ. ಆ ಬದಲಾವಣೆಗಳನ್ನು ಲೇಖಕ ತನ್ನ ಸಾಹಿತ್ಯದಲ್ಲಿ ಅಳವಡಿಸಿಕೊಂಡು 'ಸಮಕಾಲೀನ' ಪ್ರಜ್ಞೆಯನ್ನು ಜಾಗೃತಗೊಳಿಸದಿದ್ದರೆ ಆ ಲೇಖಕ 'ಔಟ್ ಡೇಟೆಡ್' ಆಗುವಂತಹ ಅಪಾಯಕ್ಕೆ ಸಿಲುಕಿಕೊಳ್ಳುತ್ತಾನೆ. ಕಾಲಕ್ಕೆ ತಕ್ಕಂತೆ ಪ್ರತಿಸ್ಪಂದನೆಗಳನ್ನು ತೋರುವುದರಲ್ಲಿ ತೇಜಸ್ವಿ ಕಾದಂಬರಿಗಳು ಯಶಸ್ವಿಯಾಗಿವೆ. ಒಟ್ಟಾರೆಯಾಗಿ ತೇಜಸ್ವಿ ಸಾಹಿತ್ಯವೇ ಈ ರೀತಿಯಾದದ್ದು. ಬದಲಾದಂತಹ ಸ್ಥಿತಿಯಲ್ಲಿ ತನ್ನ ಸಾಹಿತ್ಯ ರಚನಾ ವಿಧಾನವನ್ನು ಸಹ ತೇಜಸ್ವಿ ರೂಪಿಸಿಕೊಂಡರು. ಆದ್ದರಿಂದಲೇ ತೇಜಸ್ವಿ ಸಾಹಿತ್ಯ ಸಮಕಾಲೀನವಾಗಿ ಕಂಡುಬರುತ್ತದೆ.

ಅಬಚೂರಿನ ಪೋಸ್ಟಾಫೀಸು ಸಂಕಲನದ ಕಥೆಗಳಲ್ಲಿ ಅವರ ಹಿಂದಿನ ಬರಹಗಳಿಗೆ ಹೋಲಿಸಿದಾಗ ಮತ್ತೊಂದು ಮುಖ್ಯ ಬದಲಾವಣೆಯನ್ನು ಗಮನಿಸಬಹುದು. 'ಹುಲಿಯೂರಿನ ಸರಹದ್ದು', 'ಸ್ವರೂಪ', 'ನಿಗೂಢ ಮನುಷ್ಯರು', 'ಯಮಳ ಪ್ರಶ್ನೆ' ಕೃತಿಗಳಲ್ಲಿ ಸಾಮಾಜಿಕ ಅಥವಾ ಸಾಂಸ್ಕೃತಿಕ ಪರಿಸರ ಅಷ್ಟಾಗಿ ಮುಖ್ಯವಾಗುವುದಿಲ್ಲ. ಒಂದು ರೀತಿಯಲ್ಲಿ ಅವು ಶುದ್ಧ ಮಾನವೀಯ ಕಥನಗಳು, ಆದರೆ ಅಬಚೂರಿನ ಪೋಸ್ಟಾಫೀಸು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮುಖ್ಯವೆನಿಸುತ್ತದೆ.

ತೇಜಸ್ವಿ ಸಾಹಿತ್ಯ ಕೃಷಿ ಆರಂಭವಾದದ್ದು ನವ್ಯಕಾಲ ಘಟ್ಟದಲ್ಲಿ ನವ್ಯದ ನೆರಳಿನಲ್ಲಿ ರಚನೆಯಾದ 'ಸ್ವರೂಪ' ಮತ್ತು 'ನಿಗೂಢ ಮನುಷ್ಯರು' ಕಾದಂಬರಿಗಳು ನವ್ಯಸಾಹಿತ್ಯದ ವಿಶಿಷ್ಟ ಅಂಶಗಳನ್ನು ತನ್ನಲ್ಲಿ ಅಡಗಿಸಿಕೊಂಡಿವೆ. ತೇಜಸ್ವಿಯವರ ವ್ಯಕ್ತಿವಿಶಿಷ್ಟವಾದಿ ಸಿದ್ಧಾಂತದ ಮೂಲ ಅಂಶಗಳು 'ಸ್ವರೂಪ', 'ನಿಗೂಢ ಮನುಷ್ಯರು' ಕಾದಂಬರಿಯಲ್ಲಿ ವ್ಯಕ್ತವಾಗಿವೆ.

ನವ್ಯ ಸಾಹಿತ್ಯದ ಲಕ್ಷಣಗಳಾದ ಸಾಂಕೇತಿಕತೆ, ಸ್ವಪ್ರಜ್ಞೆ, ಸಂಕೀರ್ಣತೆಗಳು ಈ ಎರಡು ಕಾದಂಬರಿಗಳಲ್ಲಿ ಕಂಡುಬರುತ್ತವೆ.

'ಅಯ್ಯೋ ಈ ತರಹ ಕ್ಷುಲ್ಲಕ ಜೀವನದ ಯಃಕಶ್ಚಿತ್ ಘಟನೆಗಳನ್ನೆಲ್ಲ ಹೇಳುತ್ತಾ, ಬ್ರಹ್ಮಾಂಡದ ಸತ್ಯವನ್ನೆಲ್ಲ ಹೊರಗೆಡಹುವವನಂತೆ ಆಡುವುದು, ಅದನ್ನು ಉದಾಹರಿಸಿ ಕಥೆ ಬರೆಯುವುದು ಇವುಗಳೆಲ್ಲಾ ಶುದ್ಧ ಬೇಜಾರಿನ ತಲೆನೋವು ತರಿಸುವ ವಿಷಯ ಅಸಂಬದ್ಧ ವಿಷಯಗಳನ್ನೆಲ್ಲಾ ನಿನ್ನ ತಲೆಗೆತುರುಕಿ ಬೇಜಾರು ಪಡಿಸುತ್ತಿದ್ದೇನೆಂದು ತೋರುತ್ತದೆ. ಯಾಕೆ ಉಪಚಾರಕ್ಕೆ ಇಲ್ಲವೆಂದು ಹೇಳುತ್ತೀಯ, ಹೌದೆನ್ನು, ಏಕೆಂದರೆ ಈಗ ನಾನು ನುಡಿಯುತ್ತಿರುವ ಕಥೆಯ ಮೂಲ ರಸವೇ ಬೇಜಾರು. ವಿಸಂಗತವಾದ, ಅಸಂಗತವಾದ ವಿಷಯಗಳನ್ನೆತ್ತಿ ಅರ್ಥದ ಕಾಮನಬಿಲ್ಲನ್ನು ಕಟ್ಟಬೇಕು. ಸಾವನ್ನು ಬಲತ್ಕಾರದಿಂದಾದರೂ ಮರೆತು ಜೀವನಕ್ಕೊಂದು ಅರ್ಥ ರೂಪಿಸಬೇಕು. ಈ ಬ್ರಹ್ಮಾಂಡದ ಘೋರ ನಿರರ್ಥಕತೆಯಲ್ಲಿ ಕಲಾವಿದ ಅರ್ಥಪೂರ್ಣ ಕಲಾಕೃತಿಗಳನ್ನು ನಿರ್ಮಿಸ ಬೇಕೆಂಬುದು ಕಠೋರ ದುರಂತ. ಈಗ ಬದುಕಿರುವುದಕ್ಕಿಂತ ಇನ್ನು ಬದುಕಬೇಕಾಗಿರುವ ಕಾಲ ನೆನೆಸಿಕೊಂಡರೆ ಒಂದು ಬಗೆಯ ಬಳಲಿಕೆಯಾಗುತ್ತದೆ. (ಸ್ವರೂಪ, ಪುಟ-೭೮, ಲೇ. ಪೂರ್ಣಚಂದ್ರತೇಜಸ್ವಿ) ಬದುಕಿನ ನಿರರ್ಥಕತೆ ಸಾವಿನ ಕುರಿತಾದ ಆಲೋಚನೆ, ಅನಾಥ ಪ್ರಜ್ಞೆ, ಸ್ವಗತ ಈ ಎಲ್ಲಾ ಅಂಶಗಳು ಸ್ವರೂಪ ಕಾದಂಬರಿಯಲ್ಲಿ ವ್ಯಕ್ತವಾಗಿವೆ. ತೇಜಸ್ವಿಯವರ ಕವನಗಳು ಸಹ ನವ್ಯ ಸಾಹಿತ್ಯದ ಲಕ್ಷಣಗಳನ್ನು ಒಳಗೊಂಡಿದೆ.

ಬೃಹನ್ನಳೆ ಸೋಮುವಿನ ಸ್ವಗತಲಹರಿ ಈ ಕವನದಲ್ಲಿ ಬರುವ ನಾಯಕನು ಸಂಪ್ರದಾಯಬದ್ಧವಾಗಿಯೂ ಬದುಕಲಾರದೆ, ತೀವ್ರ ಕ್ರಾಂತಿಕಾರನಾಗಿಯೂ ಬದುಕಲಾರದೆ ಹೋದ ತರುಣನೊಬ್ಬನು ರೈಲು ನಿಲ್ದಾಣದ ಹೊರಗೆ ನಿಂತು ತನ್ನ ಹಿಂದುಮುಂದುಗಳನ್ನು ಅವಲೋಕಿಸಿಕೊಳ್ಳುತ್ತಾನೆ. ಇಡೀ ಕವಿತೆಯು ಅವನ ತಲೆಯಲ್ಲಿ ಆದ ನಾಟಕೀಯ ಸ್ವಗತ, ಸ್ವಗತವು ನವ್ಯ ಕಾವ್ಯದ ಒಂದು ಲಕ್ಷಣ.

ತೇಜಸ್ವಿಯವರ ಯಮಳ ಪ್ರಶ್ನೆ ನಾಟಕವು ಸಹ ನವ್ಯಕಾಲ ಘಟ್ಟಕ್ಕೆ ಸೇರಿದ್ದು. 'ಅಸಂಬದ್ಧ ಎನ್ನಿಸಿಕೊಳ್ಳಬಹುದಾದ ಘಟನಾವಳಿಗಳ ಅಂತರಂಗದಲ್ಲಿಯೇ ಅನಾದಿ ಅಂತವಾದ ಮಾನವನ ಹಣೆಯಬರಹ ಮತ್ತು ಅನಾಥ ಏಕಾಂತತೆ ಧ್ವನಿತವಾಗುವ ವಿಶೇಷಾನುಭವದೊಂದಿಗೆ ತಿರುಗಿ ಕೊನೆಯಲ್ಲಿ ಅದು ಮಹಾ ಅಸಂಬಂದ್ಧತೆಯಲ್ಲಿಯೇ ಕರಗಿ ಹೋಗುವ ಗಂಭೀರ ದುರಂತದ ಕಾಣ್ಕೆಯಲ್ಲಿ ಓದುಗರ ಚಿತ್ತ ಸಮಾಹಿತವಾಗಿ

ಬಿಡುವುದರಿಂದ ನಮ್ಮ ಕನ್ನಡ ನಾಟಕದ ಚರಿತ್ರೆಯಲ್ಲಿಯೇ ಅತ್ಯಪೂರ್ವವಾದ ಅನುಭವ ಪ್ರಪಂಚದ ದರ್ಶನವಾದಂತೆನಿಸುತ್ತದೆ. (ಯಮಳ ಪ್ರಶ್ನೆ ನಾಟಕದ ಮುನ್ನುಡಿಯಲ್ಲಿ ಜೆ.ಎಚ್. ನಾಯಕ್‌ರವರು ಹೇಳಿರುವಂತೆ) 'ನಿಗೂಢ ಮನುಷ್ಯರು' ಕಾದಂಬರಿಯು ವ್ಯಕ್ತಿ ಕೇಂದ್ರಿತ ಪ್ರಜ್ಞೆಯಿಂದ ನಿರೂಪಿತವಾಗಿದೆ. ತೇಜಸ್ವಿಯವರು ನಿಗೂಢ ಮನುಷ್ಯರು ಕಾದಂಬರಿಯ ಪ್ರಾರಂಭದಲ್ಲಿ ಉಲ್ಲೇಖಿಸಿದ್ದಾರೆ. ಈ ಇಡೀ ಕಥೆಯ ವರದಿ ಕಥೆಯ ಪಾತ್ರಗಳಲ್ಲಿ ಒಂದಾದ ರಂಗಪ್ಪನ ಪ್ರಜ್ಞೆಯ ಮುಖಾಂತರ ಅವಲೋಕಿತವಾಗಿದೆ ಎಂದರೆ ಆತನೇ ಈ ಕಥೆಯ ನಿರ್ಮಾಪಕ ಅಥವಾ ಕತೆಗಾರ.

ನವ್ಯ ಸಾಹಿತ್ಯದ ಮತ್ತೊಂದು ಅಂಶ ಪರಕೀಯತೆ. ''ನಿಗೂಢ ಮನುಷ್ಯರು'' ಜೀವನದ ಪ್ರವಾಹದೊಳಗೆ ತನ್ಮಯತೆಯನ್ನು ಪಡೆಯಲಾರದವರ ದುರಂತ ಗಾಥೆ. ಇವರು ಇಡೀ ಬದುಕಿನಿಂದ ಪರಕೀಯರಾಗಿ ಒಂದು ವ್ಯಕ್ತಿತ್ವದಿಂದ ಇನ್ನೊಂದಕ್ಕೆ ಗೋಪಾಲಯ್ಯನವರಂತೆ, ಜಗನ್ನಾಥರಂತೆ ಒಂದು ವೃತ್ತಿಯಿಂದ, ಸ್ಥಳದಿಂದ ಇನ್ನೊಂದಕ್ಕೆ ಎಷ್ಟೇ ಅಲೆಮಾರಿಯಂತೆ ಅಲೆದಾದರೂ ಎಲ್ಲಿಯೂ ನೆಲೆನಿಲ್ಲದೆ ಎಲ್ಲಕ್ಕೂ ಪರಕೀಯರಾಗುತ್ತಾರೆ ಅಥವಾ ಎಲ್ಲಕ್ಕೂ ಪರಕೀಯರಾಗುವುದರಿಂದಲೇ ಇಂತಹ ಸ್ಥಿತಿ ಅನುಭವಿಸುತ್ತಾರೆ. ಇಂತಹ ಪರಕೀಯತೆ ಯಾವ ಅರ್ಥವನ್ನು ಯಾವುದಕ್ಕೂ ತಂದು ಕೊಡಲಾರದು ಎಂಬುದು ಮುಖ್ಯವಾದ ಆಶಯದಂತೆ ಕಂಡುಬರುತ್ತದೆ. (ಏಕ-ಅನೇಕ, ಪು-೪೯, ಲೇ. ಶಶಿಕಲಾ) ಪರಕೀಯತೆ ವ್ಯಕ್ತಿನಿಷ್ಟತೆ, ಅನಾಥ ಪ್ರಜ್ಞೆ, ಅಸಂಗತತೆ, ಅಸ್ತಿತ್ವವಾದ ಈ ಎಲ್ಲಾ ಲಕ್ಷಣಗಳನ್ನು ಒಳಗೊಂಡು ನವ್ಯ ಸಾಹಿತ್ಯ ರಚಿತವಾಯಿತು. ಈ ಎಲ್ಲಾ ಲಕ್ಷಣಗಳು ತೇಜಸ್ವಿಯವರ ಮೊದಲ ಘಟ್ಟದ ಸಾಹಿತ್ಯದಲ್ಲಿಕಾಣಬಹುದು.

ಮೊದಲನೇ ಘಟ್ಟದ ನಂತರ ತೇಜಸ್ವಿ ಕಾದಂಬರಿಗಳ ಸ್ವರೂಪ ಬದಲಾಗುತ್ತದೆ. ತೇಜಸ್ವಿಯವರ ಕಾದಂಬರಿಗಳು ಹೊಸದಿಕ್ಕಿನ ಕಡೆಗೆ ಸಾಗುವುದಕ್ಕೆ ಕಾರಣಗಳೇನು ಎಂಬುದನ್ನು 'ಹೊಸ ದಿಗಂತದೆಡೆಗೆ' ಎಂಬ ಲೇಖನದಲ್ಲಿ ತಮ್ಮ ಮೇಲೆ ಪ್ರಭಾವ ಬೀರಿದ ಅಂಶಗಳ ಬಗ್ಗೆ ತಿಳಿಸಿದ್ದಾರೆ. ಲೋಹಿಯಾರವರ ತತ್ವ ಚಿಂತನೆ, ಕುವೆಂಪುವರ ಕಲಾಸೃಷ್ಟಿ, ಕಾರಂತರ ಜೀವನ ದೃಷ್ಟಿ ಮತ್ತು ಪ್ರಯೋಗದ ಶೀಲತೆ ಈ ಅಂಶಗಳು ತೇಜಸ್ವಿಯವರನ್ನು ಪ್ರಭಾವಿಸಿವೆ. ಮುಂದಿನ ಕನ್ನಡ ಸಾಹಿತ್ಯ ಸೃಷ್ಟಿಯಲ್ಲಿ ಚೈತನ್ಯಶಕ್ತಿಯಾಗಬಲ್ಲಂಥವು ಈ ಮೂರೇ ಎಂದು ಘಂಟಾಘೋಷವಾಗಿ ಸಾರುತ್ತಾರೆ. ಲೋಹಿಯಾರವರ ಸಮಾಜವಾದಿ ಚಿಂತನೆಯ ಅಂಶಗಳನ್ನು ಜೀರ್ಣಿಸಿಕೊಂಡಂತಹ ಕ್ರಮ ತೇಜಸ್ವಿಯವರ ಸಾಹಿತ್ಯ ಎರಡನೇ ಘಟ್ಟದಲ್ಲಿ ಸಮಾಜಮುಖಿಯಾಗಿ ಬೆಳೆಯುವುದನ್ನು ಕಾಣಬಹುದು.

ಹೊಸ ದಿಕ್ಕಿನೆಡೆಗೆ ಸಾಗುವುದರ ಕಾರಣಗಳನ್ನು ತೇಜಸ್ವಿ ಈ ರೀತಿ ವಿವರಿಸಿದ್ದಾರೆ. 'ನವ್ಯ ಸಾಹಿತ್ಯ ಸಂಪೂರ್ಣ ನಿಸ್ತೇಜಗೊಂಡಿದೆ. ಬದಲಾಗುತ್ತಿರುವ ಪರಿಸ್ಥಿತಿಗೆ ಪ್ರತಿಸ್ಪಂದಿಸಲು ಅದಕ್ಕೆ ಅಸಾಧ್ಯವಾಗಿದೆ. ಏಕೆಂದರೆ ಮೊದಲನೆಯದಾಗಿ ಯಾಂತ್ರಿಕವಾಗಿರುವ ಅದರ ಸಾಂಕೇತಿಕ ಸಿದ್ಧಶೈಲಿ ಮತ್ತು ತಂತ್ರಗಳು, ಎರಡನೆಯದಾಗಿ ಕೇವಲ ಉಪಾಧ್ಯಾಯರಿಂದಲೇ ತುಂಬಿರುವ ಅದರ ಸಾಹಿತಿವರ್ಗ, ಮೂರನೆಯದಾಗಿ ಸಾಹಿತ್ಯಕ್ಕೆ ಸೀಮಿತಗೊಂಡಿರುವ ಅದರ ಕ್ರಾಂತಿಕಾರಿತನ ಎಂದು ತೇಜಸ್ವಿಯವರು ನವ್ಯ ಸಾಹಿತ್ಯದ ವಿಮರ್ಶಕರಾಗಿಯೂ ಕಂಡುಬರುತ್ತಾರೆ. ವಿಮರ್ಶಾತ್ಮಕ ದೃಷ್ಟಿಕೋನವು ಬದಲಾದ ಪರಿಸ್ಥಿತಿಗಳಿಗೆ ಹೊಂದಿಕೊಳ್ಳಲು ಮತ್ತು ಸಮಾಜದ ಆಗುಹೋಗುಗಳಿಗೆ ಸ್ಪಂದಿಸುವ ಮನಸ್ಸಿನ ತುಮುಲಗಳಿರಬಹುದು. ಎರಡನೇ ಘಟ್ಟದಲ್ಲಿ ರಚನೆಯಾದ ಸಾಹಿತ್ಯವು ವ್ಯಷ್ಟಿ ಪ್ರಜ್ಞೆಯಿಂದ ಸಮಷ್ಟಿ ಪ್ರಜ್ಞೆಯ ಕಡೆಗೆ ಹೊರಳಿರುವುದನ್ನು ಕಾಣಬಹುದಾಗಿದೆ.

ಎರಡನೇ ಹಂತದ ಬರವಣಿಗೆಯಲ್ಲಿ ಕಂಡುಬರುವ ಅಬಚೂರಿನ ಪೋಸ್ಟಾಫೀಸು ಕಥೆಯಲ್ಲಿ ಆಧುನೀಕರಣದಿಂದ ಉಂಟಾಗುತ್ತಿರುವ ತಲ್ಲಣಗಳನ್ನು ನಿರೂಪಿಸಿದ್ದಾರೆ. ತಬರನಕಥೆಯು ನಿಸ್ತೇಜಗೊಂಡ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿದೆ. ಬ್ರಿಟೀಷರ ಕಾಲದಲ್ಲಿ ನೌಕರಿಗೆ ಸೇರಿದಂತಹ ತಬರ ಶೆಟ್ಟಿಯು ಸ್ವಾತಂತ್ರ್ಯೋತ್ತರ ಭಾರತದಲ್ಲಿ ವೃತ್ತಿಯಿಂದ ನಿವೃತ್ತನಾಗುತ್ತಾನೆ. ಆತನಿಗೆ ಪಿಂಚಣಿಯು ದೊರಕದೆ, ಆತನ ಹೆಂಡತಿಯ ಅನಾರೋಗ್ಯಕ್ಕೆ ಚಿಕಿತ್ಸೆ ಮಾಡಿಸಲಾಗದೆ, ಹುಚ್ಚು ಹಿಡಿಯುತ್ತದೆ. ಇದು ಜಡ್ಡುಗಟ್ಟಿರುವ ಅಧಿಕಾರಿಶಾಹಿ ವರ್ಗವನ್ನು ಪ್ರತಿನಿಧಿಸುತ್ತದೆ. ಅಧಿಕಾರ ಹಿಡಿದವರು ಮಾನವೀಯತೆಯನ್ನು ಮರೆತು ಮೃಗಗಳಂತೆ ವರ್ತಿಸುತ್ತಿರುವುದನ್ನು ತೇಜಸ್ವಿರವರ ಧೋರಣೆಗಳು ವಿರೋಧಿಸುತ್ತವೆ. ತೇಜಸ್ವಿಯವರ ಸಾಹಿತ್ಯದ ಮೂಲ ನೆಲೆಯಿಂದಲೇ ನಾವು ಗುರ್ತಿಸಬಹುದಾದ ಅಂಶವೆಂದರೆ 'ಮಾನವೀಯತೆ' ಮಾನವೀಯತೆ ರಹಿತ ಸಮಾಜವನ್ನು ತೇಜಸ್ವಿಯವರ ಸಾಹಿತ್ಯ ವಿರೋಧಿಸುತ್ತದೆ.

ಡೇರ್‌ಡೆವಿಲ್ ಮುಸ್ತಾಫಾ ಕತೆಯು ನಮಗೆ ಸಾಂಸ್ಕೃತಿಕವಾಗಿ ಮುಖ್ಯವೆನಿಸುತ್ತದೆ. ಮುಸಲ್ಮಾನ ಸಮಾಜದವನಾದ ಮುಸ್ತಾಫಾನನ್ನು ಒಬ್ಬ ಮನುಷ್ಯನಂತೆ ಕಾಣಬೇಕೆನ್ನುವ ಮಾನವೀಯ ತುಡಿತವು ಕತೆಯ ಹಿಂದಿದೆ.

ತುಕ್ಕೋಜಿ ಕತೆಯು ಆಧುನಿಕತೆಯ ಆಕ್ರಮಣದಿಂದ ಹಳ್ಳಿಯಲ್ಲಿ ಉಂಟಾಗುವ ತಲ್ಲಣಗಳನ್ನು ವ್ಯಕ್ತಪಡಿಸುತ್ತದೆ. ಕಲೆಯನ್ನು ಕಾಣುವಂತಹ ದರ್ಶನಪ್ರಜ್ಞೆ ಇಲ್ಲದ ಹಳ್ಳಿಯಲ್ಲಿ ಸೂರಾಚಾರಿ ಎಂಬ ಶಿಲ್ಪಿ ತನ್ನ ಕಲಾವಮೌಲ್ಯವನ್ನು ಕಳೆದುಕೊಳ್ಳುವ ಪರಿಸ್ಥಿತಿಯನ್ನು 'ಅವನತಿ' ಕತೆಯಲ್ಲಿ ತೇಜಸ್ವಿ ಚಿತ್ರಿಸುತ್ತಾರೆ. ಹೀಗೆ ಒಟ್ಟಾಗಿ ಅವರ ಬದಲಾದ ಸಾಹಿತ್ಯ ದೃಷ್ಟಿಕೋನವು ಅವನತಿಯತ್ತ ಸಾಗುತ್ತಿರುವ ಭಾರತದ ಸಾಂಸ್ಕೃತಿಕ ವ್ಯವಸ್ಥೆಯನ್ನು ಬಿಂಬಿಸುವುದರ ಮುಖಾಂತರ ಒಂದು ರೀತಿಯ ಎಚ್ಚರಿಕೆಯನ್ನು ತೇಜಸ್ವಿ ಸಾಹಿತ್ಯ ನೀಡುತ್ತವೆ.

ಚಿದಂಬರ ರಹಸ್ಯ ಕಾದಂಬರಿಯು ಸಹ ಸಾಂಸ್ಕೃತಿಕವಾಗಿ ಮುಖ್ಯವೆನಿಸುವ ಕಾದಂಬರಿ. ಕೆಸರೂರು ಎಂಬುದು ಒಂದು ಪ್ರತಿಮೆಯಂತೆ ಬಳಕೆಯಾಗಿದೆ. ಕೆಸರೂರು ಎಂಬುದು ಒಂದು ರೋಗಗ್ರಸ್ತ ಸಾಮಾಜಿಕ ವ್ಯವಸ್ಥೆಯನ್ನು ಬಿಂಬಿಸುವುದರ ಮುಖಾಂತರ ವಿಶ್ವವ್ಯಾಪಕತೆಯನ್ನು ಪಡೆದುಕೊಳ್ಳುತ್ತದೆ. ಕೆಸರೂರಿನ ಸಮಸ್ಯೆ ಕೇವಲ ಕೆಸರೂರಿನ ಸಮಸ್ಯೆಯಾಗಿರದೆ ಶಿಥಿಲಗೊಳ್ಳುತ್ತಿರುವ ಸಾಮಾಜಿಕ ಮೌಲ್ಯಗಳನ್ನು ಪ್ರತಿಬಿಂಬಿಸುತ್ತದೆ. ಕೆಸರೂರಿನ ಸಮಸ್ಯೆ ಕೇವಲ ಕೆಸರೂರಿಗೆ ಸೀಮಿತವಲ್ಲ. ಎಲ್ಲೋ ಒಂದು ಕಡೆ ಇಡೀ ಭಾರತವನ್ನು ಪ್ರತಿಬಿಂಬಿಸುವಂತೆ ಕಂಡು ಬರುತ್ತದೆ.

ಕೆಸರೂರಿನ ಏಲಕ್ಕಿ ಸಮಸ್ಯೆಯೊಂದಿಗೆ ತಳುಕು ಹಾಕಿಕೊಂಡಿರುವ ಕೆಸರೂರಿನ ಸಂಸ್ಕೃತಿ ಸಹ ಅವನತಿಯ ಹಾದಿ ಹಿಡಿದಿದೆ. ಹೀಗೆ ಅವನತಿಯನ್ನು ಚಿತ್ರಿಸುತ್ತಾ ತಮ್ಮ ಸುತ್ತಲಿನ ತಲ್ಲಣಗಳನ್ನು ಚಿದಂಬರ ರಹಸ್ಯ ಕಾದಂಬರಿಯು ತೆರೆದಿಡುತ್ತದೆ.

ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ತಿತ್ವದಲ್ಲಿರುವ ಜಾತಿ ಸಮಸ್ಯೆ ರೋಗಗ್ರಸ್ತ ಸಮಾಜವನ್ನು ಬದಲಾಯಿಸುವ ಕ್ರಾಂತಿಯನ್ನು ಅಪೇಕ್ಷಿಸುವುದು ತೇಜಸ್ವಿಯವರು ಸಾಂಪ್ರದಾಯಿಕ ಸಮಾಜವನ್ನು, ಮೌಲ್ಯಗಳನ್ನು ಕಳೆದುಕೊಂಡ ಸಮಾಜವನ್ನು ಬದಲಾಯಿಸಲು ಯುವಶಕ್ತಿಗೆ ಸಾಧ್ಯ ಎಂಬುದನ್ನು ಚಿದಂಬರ ರಹಸ್ಯದಲ್ಲಿ ಚಿತ್ರಿಸಿದ್ದಾರೆ.

ರೋಗಗ್ರಸ್ತ ಲಂಟಾನವು ಹತ್ತಿ ಉರಿಯುತ್ತಿರುವ ಸಂದರ್ಭದಲ್ಲಿ ಸಾಂಪ್ರದಾಯಿಕ ಸಮಾಜವನ್ನು ಮೀರಿ ನಿಂತ ರಫಿ, ಜಯಂತಿಯ ಪಾತ್ರಗಳು ಮಾದರಿಯಾಗಿವೆ. 'ನೋಡು ಜೇನುಕಲ್ಲುಗುಡ್ಡದ ತುದಿ ಚೆನ್ನಾಗಿ ಕಾಣ್ತದೆ, ಕೆಸರೂರಿನ ಜನ ಎಲ್ಲ ಈಗಲೂ ಅಲ್ಲಿಗೆ ಓಡಿದರೆ ಬೆಂಕಿಯಿಂದ ತಪ್ಪಿಸಿಕೋಬಹುದು' ಎಂದಳು ಜಯಂತಿ.

'ನಮಗೆ ಕಾಣ್ತದೆ ! ಅವರಿಗೆ ಕಾಣ್ತದ ? ಈ ಹೊಗೇಲಿ!' ಎಂದ ರಫಿ. ಪರಸ್ಪರ ದ್ವೇಷದಿಂದ, ಕೊಳೆತು ನಾರುವ ಸಂಸ್ಕೃತಿಯನ್ನೊಳಗೊಂಡಿದ್ದ ಕೆಸರೂರು ಸಂಪೂರ್ಣ ಲಂಟಾನ ಕಾಡಿನ ದಟ್ಟ ಹೊಗೆಯಿಂದ ಆವರಿಸಿತ್ತು.ಅಲ್ಲಿ ಉಸಿರು ಕಟ್ಟಿದ ಜನರೆಲ್ಲರು ಸಾವಿನ ಪಾಲಾದರು. ಆದರೆ ದ್ವೇಷ, ಅಸೂಯೆ, ಜಾತ್ಯಾತೀತ ನಿಲುವು, ಮಾನವೀಯತೆ, ಇವುಗಳನ್ನು ರೂಢಿಸಿಕೊಂಡ ರಫಿ ಮತ್ತು ಜಯಂತಿ ಸಾವಿನಿಂದ ಪಾರಾಗುವರು, ಪರಸ್ಪರ ದ್ವೇಷ, ಜಾತೀಯತೆಯಿಂದ ನರಳುತ್ತಿರುವ ಭಾರತವು ಸಹ ಕೆಸರೂರಿನಂತೆ ಹತ್ತಿ ಉರಿಯಬಹುದೇನೋ ? ಎಂಬ ನಿಲುವು ತೇಜಸ್ವಿಯವರ ಮನದಲ್ಲಿ ಮೂಡಿ ಚಿದಂಬರ ರಹಸ್ಯ ಕಾದಂಬರಿ ರಚನೆಯಾಗಿರಬಹುದೇ ಎನಿಸುತ್ತದೆ.

ಮೂರನೆಯ ಘಟ್ಟದಲ್ಲಿ ತೇಜಸ್ವಿಯ ಸಾಹಿತ್ಯವು ಮತ್ತೊಂದು ಮಹತ್ವದ ಉದ್ದೇಶದೆಡೆಗೆ ಸಾಗುತ್ತದೆ. ಮೊದಲನೆಯ ಘಟ್ಟವು ವ್ಯಕ್ತಿ ಕೇಂದ್ರಿತ ಪ್ರಜ್ಞೆಯಾದರೆ, ಎರಡನೆಯ ಘಟ್ಟವು ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಮುಖ್ಯವೆನಿಸಿದರೆ, ಮೂರನೆಯ ಘಟ್ಟದಲ್ಲಿ ಜೀವಸಂಕುಲ ಕೇಂದ್ರಿತ ಪ್ರಜ್ಞೆಯನ್ನು ಕಾಣಬಹುದು. ತೇಜಸ್ವಿಯವರ ದೃಷ್ಟಿಕೋನ ವಿಸ್ತರಣೆಗೊಳ್ಳುವುದನ್ನು ಮೂರನೆಯ ಘಟ್ಟದಿಂದ ತಿಳಿದುಕೊಳ್ಳಬಹುದು.

ಮೂರನೆಯ ಘಟ್ಟದಲ್ಲಿ ಬರುವ ಕಾದಂಬರಿ ಕರ್ವಾಲೊ, ಈ ಕಾದಂಬರಿಯಲ್ಲಿ ನಿರೂಪಕನ ಜೊತೆಯಲ್ಲಿ ಇರುವ 'ಕಿವಿ' ಎಂಬ ನಾಯಿ ಮರಿಯು ಕಾದಂಬರಿಯ ಪಾತ್ರವಾಗಿರುವುದು ವಿಶೇಷವಾಗಿದೆ.

ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವ ಗುತ್ತಿಯ ಪಾತ್ರದ ಜೊತೆಗೆ ಬರುವ ಹುಲಿಯ ಎಂಬ ನಾಯಿಯು ಸಹ ಒಂದು ಪಾತ್ರವಾಗಿ ಮೂಡಿಬಂದಿದೆ. ಈ ಹುಲಿಯನ ದೆಸೆಯಿಂದ ಗುತ್ತಿಗೆ 'ನಾಯಿಗುತ್ತಿ' ಎಂಬ ಹೆಸರು ಬಂದಿರುತ್ತದೆ.

ಮನುಷ್ಯ ಪಾತ್ರಗಳ ಜೊತೆಗೆ ಪ್ರಾಣಿಗಳನ್ನು ಪಾತ್ರಗಳನ್ನಾಗಿಸುವ ಕುವೆಂಪುರವರ ವಿಶಿಷ್ಟ ದೃಷ್ಟಿಕೋನವು ತೇಜಸ್ವಿರವರ ಮೇಲೆ ಪ್ರಭಾವ ಬೀರಿರಬಹುದು. ಜೀವಿಯ ಹುಟ್ಟನ್ನೇ ಶೋಧಿಸುವ ಸಲುವಾಗಿ ನಿರೂಪಕ ಮತ್ತು ವಿಜ್ಞಾನಿಯಾದ ಕರ್ವಾಲೊ ಹಾರುವ ಓತಿಯನ್ನು ಬೆನ್ನತ್ತಿ ಹೋಗುವುದು 'ವಿಸ್ಮಯ'ಗಳ ರಹಸ್ಯವನ್ನು ತಿಳಿದುಕೊಳ್ಳುವ ಸಲುವಾಗಿ, ಈ ಕಾದಂಬರಿಯಲ್ಲಿ ಗ್ರಾಮೀಣ ಪರಿಸರದೊಂದಿಗೆ, ಪ್ರಾಕೃತಿಕ ಪರಿಸರವು

ಅನ್ವೇಷಣೆಗೆ ಒಳಗಾಗಿದೆ. ಸಮಾಜಮುಖಿಯಾದ ನಿರೂಪಕನ ದೃಷ್ಟಿಕೋನ ಜೀವಕೇಂದ್ರಿತ ನೆಲೆಗೆ ಪಲ್ಲಟಗೊಂಡು 'ಹಾರುವ ಓತಿಯ' ರಹಸ್ಯವನ್ನು ಬೆನ್ನತ್ತಿಹೋಗುವುದು ಕನ್ನಡ ಸಾಹಿತ್ಯದಲ್ಲೇ ವಿಶಿಷ್ಟವಾದ ಕಥಾನಕವನ್ನು ಕರ್ವಾಲೊ ಕಾದಂಬರಿಯ ಮೂಲಕ ತೆರೆದಿಡುತ್ತದೆ.

ಹಾರುವ ಓತಿಯನ್ನು ಬೆನ್ನತ್ತಿ ಹೊರಟ ಕರ್ವಾಲೊ, ನಿರೂಪಕ ಬಿರ್ಯಾನಿ ಕರಿಯಪ್ಪ, ಹಾವುಗೊಲ್ಲರ ಎಂಕ್ಟ, ಇವರೆಲ್ಲರೂ ಸಾಮಾಜಿಕ, ಸಾಂಸಾರಿಕ ಬಂಧನಗಳಿಂದ ದೂರಸರಿದು 'ಹಾರುವ ಓತಿ' ಯನ್ನು ಬೆನ್ನತ್ತುವುದು ಆಧ್ಯಾತ್ಮಿಕ ಶೋಧದಂತೆ ಕಂಡುಬರುತ್ತದೆ. ತೇಜಸ್ವಿಯವರ ಸಾಹಿತ್ಯದ ಮೂಲಗುಣವಾದ ವಿಸ್ಮಯವೇ ಈ ಶೋಧಕ್ಕೆ ಕಾರಣವಾಗಿದೆ.

ವಿಜ್ಞಾನವು ಸಾಂಪ್ರದಾಯಿಕತೆಯ ದೃಷ್ಟಿಯಲ್ಲಿ ಕೆಳಮಟ್ಟಕ್ಕಿಳಿಯುವುದನ್ನು ವಿಜ್ಞಾನಿಯಾದ ಕರ್ವಾಲೊರವರನ್ನು ಹಳ್ಳಿಯ ಜನರು ಗ್ರಹಿಸುವ ಮುಖಾಂತರ ಕಂಡುಕೊಳ್ಳಬಹುದಾಗಿದೆ. ಸೃಷ್ಟಿಯ ರಹಸ್ಯವನ್ನು ಅರಿಯಲು ಹಾರುವ ಓತಿಯ ಬೆನ್ನು ಹತ್ತಿ ಹೊರಟ ಕರ್ವಾಲೊ ನಿರೂಪಕ, ಬಿರ್ಯಾನಿ ಕರಿಯಪ್ಪ ಮುಂತಾದವರು ಅದನ್ನು ಹಿಡಿಯುವಲ್ಲಿ ವಿಫಲರಾಗುತ್ತಾರೆ. ಇದರರ್ಥ ಪ್ರಕೃತಿಯ ಒಳಗಿರುವ ವಿಸ್ಮಯಗಳನ್ನು ಶೋಧಿಸುವಲ್ಲಿ ಮನುಷ್ಯ ವಿಫಲವಾಗುವುದು. ಪ್ರಕೃತಿಯೇ ಇಲ್ಲಿ ತನ್ನ ಸಾರ್ವಭೌಮತ್ವವನ್ನು ಸಾಧಿಸಿರುವುದನ್ನು ಗುರುತಿಸಬಹುದು.

ಮಾಯಾಲೋಕ ಕಾದಂಬರಿಯ ಮುನ್ನುಡಿಯಲ್ಲಿ ತೇಜಸ್ವಿಯವರು ಹೇಳುವಂತೆ 'ನಾಲ್ಕು ದಶಕದ ಹಿಂದೆ ಅಬಚೂರಿನ ಪೋಸ್ಟಾಫೀಸು ಕಥಾ ಸಂಕಲನಕ್ಕೆ ಮೊದಲ ಮಾತುಗಳನ್ನು ಬರೆಯುತ್ತಾ ಬದಲಾಗುತ್ತಿರುವ ಸನ್ನಿವೇಶಗಳ ಸವಾಲುಗಳನ್ನು ಎದುರಿಸಲು ನಾವು ಹೊಸದಿಗಂತಗಳತ್ತ ಹೋಗಬೇಕಾಗಿರುವುದನ್ನು ಜ್ಞಾಪಿಸಿದ್ದೆ.ಈ ಇಪ್ಪತ್ತೊಂದನೆಯ ಶತಮಾನ ಪ್ರಾರಂಭವಾಗುತ್ತಿದ್ದಂತೆ ಅಂಥದೇ  ಪರಿಸ್ಥಿತಿಯಲ್ಲಿ ಮತ್ತೊಮ್ಮೆ ನಿಂತಿದ್ದೇವೆಂದು ಅನ್ನಿಸುತ್ತದೆ. ನಮ್ಮೆದುರು ಬದಲಾವಣೆಗಳ ಮಹಾಪೂರವೇ ಹರಿಯುತ್ತದೆ. ಹೊಸ ನುಡಿಗಟ್ಟುಗಳು, ಹೊಸ ಉಕ್ತಿಭಂಗಿ, ಹೊಸ ಅಭಿವ್ಯಕ್ತಿ ವಿಧಾನಗಳ ಬಗ್ಗೆ ನಾವೀಗ ಗಮನಹರಿಸಿ ಹೊಸ ದಿಗಂತಗಳತ್ತ ಅನ್ವೇಷಣೆ ಹೊರಡಬೇಕಾಗಿದೆ.''

ಕಾಲದ ಆಗುಹೋಗುಗಳಿಗೆ, ಸಮಾಜದ ಬದಲಾವಣೆಗಳನ್ನು ಗಮನಿಸುವುದಕ್ಕೆ ದರ್ಶನ ಪ್ರಜ್ಞೆಯ ಸೂಕ್ಷ್ಮದೃಷ್ಟಿಯ ಲೇಖಕನಿಂದ ಮಾತ್ರ ಸಾಧ್ಯ. ತೇಜಸ್ವಿಯವರು

ಬದಲಾಗುತ್ತಿರುವ ಸನ್ನಿವೇಶಗಳಿಗೆ ತಕ್ಕಂತೆ ಎದುರಾಗುವ ಸಮಸ್ಯೆಗಳಿಗೆ ಪ್ರತಿಸ್ಪಂದಿಸುವ ವಿಧಾನ ವಿಶಿಷ್ಟವಾದದ್ದು ಇದು ಕ್ರಿಯಾಶೀಲ ಲೇಖಕನ ಲಕ್ಷಣ. ತೇಜಸ್ವಿಯವರ ಚಿಂತನ ಕ್ರಮವು ಸಮಕಾಲೀನವಾಗಿತ್ತು ಎಂಬುದಕ್ಕೆ ಮಾಯಾಲೋಕ ಕಾದಂಬರಿಯ ಮುನ್ನುಡಿಯಲ್ಲಿ ವ್ಯಕ್ತವಾಗಿರುವ ಮಾತುಗಳೇ ಸಾಕ್ಷಿಯಾಗಿವೆ.

ಮಾಯಾಲೋಕ ಕಾದಂಬರಿಯನ್ನು ತೇಜಸ್ವಿ ಬರವಣಿಗೆಯ ನಾಲ್ಕನೆಯ ಘಟ್ಟ ಎಂದು ಗುರುತಿಸಬಹುದು. ತುಂಬಾ ಸೂಕ್ಷ್ಮವಾಗಿ ನೋಡುವ ಲೇಖಕನಿಗೆ ತನ್ನ ಸುತ್ತಮುತ್ತಲಿನ ಸಮಾಜದಲ್ಲಿ ನಡೆಯುತ್ತಿರುವ ಸಣ್ಣ ಘಟನೆಗಳು ಹೇಗೆ ಸಾಮಾಜಿಕ ಪರಿಸ್ಥಿತಿಯನ್ನು ನಿಯಂತ್ರಿಸುತ್ತವೆ ಮತ್ತು ಬದಲಾಯಿಸುತ್ತವೆ ಎಂಬ ವಿಷಯವನ್ನು ತೇಜಸ್ವಿ ಮಾಯಾಲೋಕ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಮಾಯಾಲೋಕ ಕಾದಂಬರಿಯಲ್ಲಿ ಯಾವುದು ಅಮುಖ್ಯವಲ್ಲ, ಯಾರು ಅಮುಖ್ಯರಲ್ಲ, ಗೊಂದಲೇರಿ ಎಂಬ ಅರೆ ನಗರದಲ್ಲಿ ನಡೆಯುವ ಪ್ರತಿಯೊಂದು ಘಟನೆಯನ್ನು ಮಾಯಾಲೋಕ ಕಾದಂಬರಿಯಲ್ಲಿ ತೇಜಸ್ವಿಯವರು ದಾಖಲಿಸುತ್ತಾರೆ.

ಮಾಯಾಲೋಕ ಕಾದಂಬರಿಯಲ್ಲಿ ಬಂದಿರುವ ಸ್ಕೆಚ್ ಮತ್ತು ರೇಖಾಚಿತ್ರಗಳು ಹೊಸ ಅಭಿವ್ಯಕ್ತಿಯ ಮಾಧ್ಯಮವನ್ನು ತೆರೆದಿಡುತ್ತವೆ. ಮಾಯಾಲೋಕ ಕಾದಂಬರಿಯನ್ನು ತೇಜಸ್ವಿಯವರ ಆತ್ಮಕತೆ ಎಂದು ಕರೆದರೂ ತಪ್ಪಾಗಲಾರದು. ಏಕೆಂದರೆ ಕಾದಂಬರಿಯ ನಿರೂಪಕ ವಿವರಿಸುವ ಅನುಭವಗಳು ಲೇಖಕನದು ಆಗಿಬಿಡುತ್ತವೆ.

ಒಮ್ಮೆ ತೇಜಸ್ವಿಗೆ ಅವರ ಆಪ್ತರೊಬ್ಬರು 'ನೀವೂ ಒಂದು ಆತ್ಮಚರಿತ್ರೆ ಬರೀರಿ ಸಾರ್' ಎಂದು ಕೇಳಿದ್ದಕ್ಕೆ 'ಮಾಯಾಲೋಕ'ವನ್ನೇ ನನ್ನ ಆತ್ಮಚರಿತ್ರೆ ಎಂದು ತಿಳ್ಕೊಳ್ರಯ್ಯ ಎಂದಿದ್ದರಂತೆ. ತೇಜಸ್ವಿಯವರ ಹಿಂದಿನ ಸಾಹಿತ್ಯದಲ್ಲಿ ಕೇವಲ ಪ್ರೇಕ್ಷಕನಾಗಿ ಪಾಲ್ಗೊಂಡಿದ್ದ ತೇಜಸ್ವಿಯವರು ಮಾಯಾಲೋಕ ಕಾದಂಬರಿಯಲ್ಲಿ ಒಂದು ಪಾತ್ರವಾಗಿ ಕಾಣಿಸಿಕೊಳ್ಳುತ್ತಾರೆ. ಮಾಯಾಲೋಕ ಕಾದಂಬರಿಯಲ್ಲಿ ದೈನಿಕ ವಿವರಗಳು ಹೇಗೆ ಮುಖ್ಯವೆನಿಸುತ್ತವೆ ಎಂಬ ಪ್ರಶ್ನೆ ತುಂಬಾ ಮುಖ್ಯವಾದದು, ಬರಗಾಲದ ಪರಿಸ್ಥಿತಿ, ಹಳ್ಳದ ನೀರಿಗಾಗಿ ಊರಳ್ಳಿ ಮತ್ತು ಮಕ್ಕಿಗದ್ದೆಯವರ ತಕರಾರುಗಳು, ಪ್ರತಿಭಟನೆಗಳು, ರಸ್ತೆ ತಡೆ, ಮುಷ್ಕರ, ಸರ್ಕಾರಿ ಅಧಿಕಾರಿಗಳ ಪೊಳ್ಳು ವರ್ತನೆ, ರಾಜಕಾರಣಿಗಳ ಅವಕಾಶವಾದಿತನ, ಸುದ್ದಿಗಾಗಿ ಪತ್ರಿಕೆಗಳು ಮಾಡುವ ಸಂಚು, ಹೊಟ್ಟೆಪಾಡಿಗಾಗಿ ನಾನಾ

ನಮೂನೆಯ ಕೆಲಸಗಳನ್ನು ಮಾಡುವ ಕರಾಟೆ ಮಂಜ, ಚಾಡಿ ಹೇಳುವುದರಲ್ಲಿ ನಿಸ್ಸೀಮನಾದ ಇಕ್ಬಾಲ್, ರೈತ ಸಂಘದ ಹೋರಾಟ, ಕರೆಂಟಿನವರ ಕಾಟ, ಹೀಗೆ ಗೊಂದಲಗೇರಿ ಎಂಬ ಅರೆ ನಗರದಲ್ಲಿ ಅಸ್ತಿತ್ವದಲ್ಲಿರುವ ಸಮಸ್ಯೆಗಳನ್ನು ತೇಜಸ್ವಿ ದಾಖಲಿಸುತ್ತಾರೆ. ಈ ಎಲ್ಲಾ ಸಮಸ್ಯೆಗಳಿಗೆ ಮನುಷ್ಯನಿಂದ ಪರಿಹಾರವನ್ನು ಕಂಡಹಿಡಿಯಲು ಸಾಧ್ಯವಿಲ್ಲ. ಆದಕ್ಕೆ ಪ್ರಕೃತಿಯೇ ತನ್ನ ಚಾಕಚಕ್ಯತೆಯಿಂದ ಪರಿಹಾರವನ್ನು ಸೂಚಸುತ್ತದೆ.

'ಮಳೆ ಬಂದರೆ ಯಾರು ಬರುತ್ತಾರೋ ಮುಷ್ಕರಕ್ಕೆ ? ಮಳೆ ಬರ್ತಿದ್ದಹಾಗೆ ನಮ್ಮ ಬೇಸಿಗೆ ನಾಟಕಕ್ಕೆ ತೆರೆ ಬೀಳ್ತೂಂತ ತಿಳುಕೋ, ನಿಮ್ಮ ಮೆಣಸಿನ ಮಡಿ! ಹಳ್ಳದ ಅಡ್ಡಗಟ್ಟೆ ತಕರಾರು ! ಇಕ್ಬಾಲ್‌ಸಾಬಿಯ ಪುಕಾರುಗಳು, ಕರೆಂಟಿನವರ ಕಾಟ ಎಲ್ಲಾ ಒಂದೇ ಏಟಿಗೆ ಕ್ಲೋಸ್''. (ಮಾಯಾಲೋಕ-೧, ಪು-೨೩೮, ಪ್ರ.ಪುಸ್ತಕ ಪ್ರಕಾಶನ, ಮೊದಲನೇ ಮುದ್ರಣ ೨೦೦೬, ಲೇ. ಕೆ.ಪಿ. ಪೂರ್ಣಚಂದ್ರ ತೇಜಸ್ವಿ)

ಗೊಂದಲಗಳಿಂದಲೇ ತುಂಬಿ ಹೋಗಿದ್ದ ಗೊಂದಲಗೇರಿ ಮಳೆ ಬಿದ್ದೊಡನೆ ಪರಿವರ್ತನೆಯಾಗುತ್ತದೆ. ಸಾಮಾಜಿಕ ಸಮಸ್ಯೆಗಳಿಗೆಲ್ಲ ಪ್ರಕೃತಿಯಲ್ಲಿಯೇ ಉತ್ತರವಿದೆ ಎಂದು ತೇಜಸ್ವಿ ಪ್ರತಿಪಾದಿಸಿದ್ದಾರೆ.

ಹೀಗೆ ತೇಜಸ್ವಿ ಸಾಹಿತ್ಯ ಕಾಲಕ್ಕೆ ತಕ್ಕಂತೆ ಪ್ರತಿಸ್ಪಂದಿಸುವ ಗುಣದಿಂದ ವಿಶಿಷ್ಟವಾಗಿದೆ. ಈ ನಿಟ್ಟಿನಲ್ಲಿ ತೇಜಸ್ವಿ ಸಾಹಿತ್ಯವನ್ನು ನಾಲ್ಕು ಘಟ್ಟಗಳಾಗಿ ವಿಂಗಡಿಸಿಕೊಳ್ಳಬಹುದು. ಈ ದೃಷ್ಟಿಕೋನದಿಂದ ತೇಜಸ್ವಿಯವರನ್ನು ಕೆ. ರಾಮದಾಸ್‌ರವರು ಕಾಲದ ಕಾಲುಸದ್ದು ಆಲಿಸಬಲ್ಲ ಲೇಖಕ ಎಂದು ಕರೆದಿರುವುದು ಅತಿಶಯೋಕ್ತಿಯೇನಲ್ಲ.

# ಅಧ್ಯಾಯ - ೪

## ತೇಜಸ್ವಿ ಕಾದಂಬರಿಗಳ ಭಾಷೆ

ಸೃಜನಶೀಲ ಸಾಹಿತಿಯು ತನ್ನ ಅನುಭವಗಳನ್ನು ಸಾಹಿತ್ಯದಲ್ಲಿ ವ್ಯಕ್ತಪಡಿಸಬೇಕಾದರೆ ತನ್ನದೇ ಆದ ಭಾಷೆಯನ್ನು ರೂಢಿಸಿಕೊಳ್ಳಬೇಕು. ಅಕ್ಷರ ಜಗತ್ತಿನಲ್ಲಿ ಭಾಷೆಯು ಮಹತ್ವದ ಪಾತ್ರವನ್ನು ವಹಿಸುತ್ತದೆ. ಭಾಷೆಯ ಮುಖಾಂತರ ಲೇಖಕನ ಅನುಭವಗಳು ಮರುಸೃಷ್ಟಿಗೊಳ್ಳುತ್ತವೆ. ಲೇಖಕನು ಬಳಸುವ ಭಾಷೆಯು ಸಹೃದಯನ ಅಂತಃಕರಣವನ್ನು ತಲುಪುವಂತೆ ಇರಬೇಕು. ಲೇಖಕನು ಕೃತಿಯ ವಸ್ತು ಅಭಿವ್ಯಕ್ತಿ ಕ್ರಮಕ್ಕೆ ತಕ್ಕಂತೆ ಭಾಷೆಯನ್ನು ಬಳಸಿಕೊಳ್ಳುವುದು ಕನ್ನಡ ಸಾಹಿತ್ಯದಲ್ಲಿ ರೂಢಿಯಲ್ಲಿದೆ. ಲೇಖಕನು ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡು ತನ್ನ ಅನುಭವಲೋಕವನ್ನು ಸೃಜಿಸಿದಾಗ ಭಾಷೆಯ ಕಾರ್ಯ ಭಾಗಶಃ ಯಶಸ್ವಿಯಾಗುತ್ತದೆ. ಲೇಖಕನು ಭಾಷೆ ಬಳಸಬೇಕೆಂಬ ಒಂದೇ ಉದ್ದೇಶದಿಂದ ಭಾಷೆಯನ್ನು ಬಳಸುವುದಿಲ್ಲ. ಹಾಗೆ ಬಳಸಿದರೆ ಅದು ಕೇವಲ ಪದಗಳಗುಚ್ಛವಾಗಿ ಉಳಿದುಬಿಡುವಂತಹ ಸಾಧ್ಯತೆಗಳಿರುತ್ತವೆ. ಅದನ್ನು ಮೀರಿ ತನ್ನ ಚಿಂತನೆ ಅನುಭವಗಳನ್ನು ಭಾಷೆಯಲ್ಲಿ ವ್ಯಕ್ತಪಡಿಸಿದಾಗ ಭಾಷೆಯು ಕೊಳಲಿನ ರೀತಿ ಬಳಕೆಯಾಗುತ್ತದೆ. ಇಲ್ಲದಿದ್ದರೆ ಭಾಷೆಯು ಬಿದಿರಾಗಿಯೇ ಉಳಿಯುತ್ತದೆ.

ತೇಜಸ್ವಿಯವರ ಕಾದಂಬರಿಯಲ್ಲಿ ಬಳಕೆಯಾಗಿರುವ ಭಾಷೆಯನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ನೋಡುವ ಕ್ರಮವಲ್ಲ. ಅದನ್ನು ಸಾಂಸ್ಕೃತಿಕ ಅನನ್ಯತೆಯ ಪ್ರಶ್ನೆಯಾಗಿ ಒಂದು ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಎಷ್ಟರಮಟ್ಟಿಗೆ ತನ್ನ ಪಾತ್ರವನ್ನು ವಹಿಸಿದೆ ಎಂದು ನೋಡುವ ಉದ್ದೇಶವಿದೆ. ಕನ್ನಡ ಸಾಹಿತ್ಯದಲ್ಲಿ ಭಾಷಾ ಬಳಕೆಯನ್ನು ಕುರಿತಂತೆ ಚಳುವಳಿಯೇ ನಡೆದಿದೆ. ಪಂಪನ ಕಾಲದ ಭಾಷೆಗೂ, ವಚನಕಾರರ ಕಾಲದ ಭಾಷೆಗೂ ತುಂಬಾ ವ್ಯತ್ಯಾಸವಿದೆ. ಈ ವ್ಯತ್ಯಾಸ ಗಮನಾಹವಾದದ್ದು. ವಚನಕಾರರು ಸರಳವಾದ ಭಾಷೆಯ ಮುಖಾಂತರ ತಮ್ಮ ವಚನಗಳನ್ನು ಜನ ಸಾಮಾನ್ಯರ ಮಟ್ಟಿಗೂ ತಲುಪಿಸುವಲ್ಲಿ ಯಶಸ್ವಿಯಾದರು. ಸಮಾಜವನ್ನು ಕುರಿತಂತೆ ರಚನೆಯಾದಂತಹ ಸಾಹಿತ್ಯವು ಸಮಾಜದ ಜನರು ಅರ್ಥೈಸುವ ಮಟ್ಟಿಗೆ ಇರಬೇಕು. ಒಂದು ಸಾಹಿತ್ಯ ಕೃತಿಯ ಭಾಷೆಯು ಜನಸಾಮಾನ್ಯರ ಮಧ್ಯದಲ್ಲಿ ಬಳಕೆಯಾಗುವ ಭಾಷೆಯಾದಾಗ ಅದು ಮಹತ್ವವನ್ನು ಪಡೆದುಕೊಳ್ಳುತ್ತದೆ.

ಕ್ರಿಯಾಶೀಲ ಲೇಖಕರು ಲೋಕದಲ್ಲಿ ಬಳಕೆಯಾಗುವ ಭಾಷೆಯನ್ನೇ ಬಳಸಿದರೂ, ಅದು ಬಳಕೆಯಾಗುವ ರೂಪ ವಿಭಿನ್ನವಾದದ್ದು, ಸಂಸ್ಕೃತಿಯ ದೃಷ್ಟಿಯಿಂದ ಭಾಷೆಯನ್ನು ಗಮನಿಸಿದಾಗ ಭಾಷೆ ಎನ್ನುವುದು ಸಂಸ್ಕೃತಿಯನ್ನು ಆಕರವಾಗಿಸಿಕೊಂಡಿದೆಯೇ? ಭಾಷೆಯು ಸಂಸ್ಕೃತಿಯನ್ನು ತನ್ನೊಳಗೆ ಶೇಖರಿಸಿಕೊಂಡಿರುತ್ತದೆಯೇ ? ಎಂಬ ಪ್ರಶ್ನೆಗಳು ಮುಖ್ಯವಾದವು, ಭಾಷೆಯು ಒಂದು ಜನಾಂಗದ ಸಂಸ್ಕೃತಿಯನ್ನು ತೆರೆದಿಡುವಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಒಂದು ಭಾಷೆಯು ಜೀವನ ಕ್ರಮವನ್ನು ಕಟ್ಟಿಕೊಡುವಂತಹ ಸಾಧ್ಯತೆಗಳಿವೆ. ವ್ಯಾಕರಣ ನಿಯಮಗಳನ್ನು ಮೀರಿ ಸಂಸ್ಕೃತಿಯಲ್ಲಿ ಭಾಷೆಯು ಬಳಕೆಯಾಗುತ್ತದೆ.

ಭಾಷೆ ಎನ್ನುವುದು ಸಂಸ್ಕೃತಿಯ ದೃಷ್ಟಿಯಿಂದ ನೋಡಿದಾಗ ಮೇಲುಕೀಳು ಎಂಬ ಭಾವನೆಗಳನ್ನು ಬಿತ್ತುವ ಅಪಾಯವಿರುತ್ತದೆ. ಇಂತಹ ಅಪಾಯಗಳನ್ನು ಮೀರಿ ಸಾಹಿತ್ಯದಲ್ಲಿ ಭಾಷೆಯು ಬಳಕೆಯಾಗಬೇಕು.

ಬೇಂದ್ರೆಯವರು ಭಾಷೆಯ ಬಗ್ಗೆ ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ' ಇದು ಮಂತ್ರ ಅರ್ಥಕ್ಕೊಗ್ಗದ ಶಬ್ದಗಳ ಪವಣಿಸುವ ತಂತ್ರ' ಎಂದು ಭಾಷೆಯ ಬಗ್ಗೆ ಅದು ಅರ್ಥವನ್ನು ಮೀರುವ ಬಗೆಯನ್ನು ಬೇಂದ್ರೆಯವರು ವಿವರಿಸುತ್ತಾರೆ. ಬೇಂದ್ರೆಯವರ ಭಾಷೆ ನಾದಮಯತೆಯಿಂದ ಕೂಡಿದೆ. ಭಾಷೆ ಎನ್ನುವುದು ತನ್ನೊಳಗೆ ಅಡಗಿಕೊಂಡಿರುವ ಸಂಸ್ಕೃತಿಯನ್ನು ವಿವರಿಸುವ ಕೆಲಸ ಮಾಡುತ್ತದೆ.

ತೇಜಸ್ವಿ ಕಾದಂಬರಿಗಳಲ್ಲಿ ಭಾಷೆಯು ಮೊದಲ ಘಟ್ಟದಲ್ಲಿ ಬಿಗಿ ಬಂಧ ಹಿಡಿತದಿಂದ ಬಳಕೆಯಾದರೆ ನಂತರದ ಘಟ್ಟಗಳಲ್ಲಿ ತುಂಬಾ ಸರಳವಾದ ಭಾಷೆಯನ್ನು ತೇಜಸ್ವಿಯವರು ಬಳಸುತ್ತಾರೆ.

ತೇಜಸ್ವಿಯವರು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಅನುಭವದ ಸೂಕ್ಷ್ಮಾತಿ ಸೂಕ್ಷ್ಮಗಳನ್ನು ಆಳ ಪಾತಾಳದ ಸತ್ಯಗಳನ್ನು ಅಭಿವ್ಯಕ್ತಿಸಲು ಭಾಷೆಯನ್ನು ಸೌಷ್ಠವಗೊಳಿಸುವುದು ಜನ ಸಮಷ್ಠಿಯ ಸಂಕೀರ್ಣ ಜವಾಬ್ದಾರಿ, ಲೇಖಕ ಈ ಸಮಷ್ಠಿಯಲ್ಲಿ ಒಬ್ಬ ಎಂದು ಹೇಳಿದ್ದಾರೆ. ಲೇಖಕನು ಭಾಷೆಯ ಮೂಲಕ ಮಾಡಬೇಕಾದ ಸೇವೆ ಎಂದರೆ ಈ ಬಗೆಯದೆ ಎಂದು ತೇಜಸ್ವಿ ಹುಲಿಯೂರಿನ ಸರಹದ್ದು ಮುನ್ನುಡಿಯಲ್ಲಿ ತಿಳಿಸಿದ್ದಾರೆ. ತೇಜಸ್ವಿ ತನ್ನ ಸಾಹಿತ್ಯದ ವಸ್ತುವನ್ನು ಮಲೆನಾಡಿನ

ಬದುಕಿನಿಂದ ತೆಗೆದುಕೊಂಡಿದ್ದಾರೆ. ಆದ್ದರಿಂದ ಅವರ ಕಾದಂಬರಿಗಳ ಭಾಷೆಯು ಅದೇ ಆಗಿದೆ.

'ತೇಜಸ್ವಿ ಸುಂದರವಾದ ಭಾಷೆಯಲ್ಲಿ ವೈವಿಧ್ಯಪೂರ್ಣ ಅನುಭವಗಳನ್ನು ದಾಖಲಿಸುತ್ತಾರೆ. ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಗಳ ಪ್ರಭಾವವಿಲ್ಲದೆ ಅಚ್ಚಕನ್ನಡ ಶೈಲಿಯೊಂದನ್ನು ತೇಜಸ್ವಿ ರೂಪಿಸಿಕೊಂಡಿದ್ದಾರೆ. ಎಂಥ ಜಟಿಲ ತಾತ್ವಿಕ ವಿಷಯಗಳನ್ನು ಸಹ ಅವರು ಜಿಡುಕಿಲ್ಲದೆ ನಿರೂಪಿಸಬಲ್ಲರು. ವಿಜ್ಞಾನದ ವಿಷಯಗಳ ಬಗ್ಗೆ ಇವರಷ್ಟು ಸರಳವಾಗಿ ತಿಳಿಯಾಗಿ ಬರೆಯುವವರು ಕನ್ನಡದಲ್ಲಿ ತೀರಾ ವಿರಳ' ಎಂದು ತೇಜಸ್ವಿಯವರ ಶೈಲಿಯ ಬಗ್ಗೆ ಟಿ.ಪಿ.ಅಶೋಕ್‌ರವರು ಅಭಿಪ್ರಾಯ ಪಡುತ್ತಾರೆ. ವಿಜ್ಞಾನದಂತಹ ಜಟಿಲ ವಿಷಯಗಳನ್ನು ಹೇಳುವಾಗ ಅಷ್ಟೇ ಜಟಿಲವಾಗಿ ನಿರೂಪಿಸಿದರೆ ಓದುಗರಿಗೆ ತಲುಪುವುದಿಲ್ಲ. ಆದ್ದರಿಂದ ತೇಜಸ್ವಿಯವರು 'ತಮ್ಮದೇ ಆದ ಭಾಷೆಯನ್ನು ರೂಢಿಸಿಕೊಂಡದ್ದು ವಿಶೇಷವೇ ಸರಿ'.

ಸ್ಥೂಲವಾಗಿ ವಿವರಿಸುವುದಾದರೆ (ನಾವು ನೀವೆಲ್ಲ ಬಹುಶಃ ಸಾಧಾರಣವಾಗಿ ಅರಿತಿರುವಂತೆ) ಮುಖ್ಯವಾಗಿ ಕಾವ್ಯಕ್ಕೆ ಮತ್ತು ಒಟ್ಟಿನಲ್ಲಿ ಸಾಹಿತ್ಯಕ್ಕೆ ಎರಡು ಆಯಾಮಗಳಲ್ಲಿ ಅರ್ಥ ಸ್ಫುರಿಸುತ್ತದೆ. ಮೊದಲನೆಯದು ವಾಚ್ಯಾರ್ಥ ಎಂದರೆ ಭಾಷೆಯನ್ನು ನಾವೆಲ್ಲ ದಿನನಿತ್ಯ ಬಳಸುವುದರಿಂದ ತಕ್ಷಣ ಸ್ಫುರಿಸುವ ಸಾಕಷ್ಟು ನಿರ್ದಿಷ್ಟವಾದ ಅರ್ಥ. ಇನ್ನೊಂದು ಭಾಷೆಗೂ ಒಂದು ಚರಿತ್ರೆ ಮತ್ತು ಭೂಗೋಲ ಇರುವುದರಿಂದ ಭಾಷೆಯನ್ನು ಜನ ನಾನಾ ಸಂದರ್ಭಗಳಲ್ಲಿ, ನಾನಾ ಕಡೆಗಳಲ್ಲಿ ಉಪಯೋಗಿಸುವುದರಿಂದ ಅದಕ್ಕೆ ಉಂಟಾಗುವ ಅನೇಕ ಸ್ಥರಗಳ ಅರ್ಥ ನಾವು ಧ್ವನಿ ಅಥವಾ ಧ್ವನ್ಯರ್ಥ ಎಂದು ಕರೆಯುತ್ತೇವೆ. ನವ್ಯ ಕಾವ್ಯ ಚಳುವಳಿಯ ಸಂದರ್ಭದಲ್ಲಿ ಕವಿಗಳು, ಸಾಹಿತಿಗಳು, ಸಂಕೇತ, ಪ್ರತೀಕತ ಮತ್ತು ಪ್ರತಿಮೆಗಳ ಮುಖಾಂತರ ಕೃತಿ ರಚನೆ ಮಾಡತೊಡಗಿದರು ಎಂದರೆ ಇವರ ಕೃತಿಗಳಲ್ಲಿ ನವೋದಯದ ಕೃತಿಗಳಲ್ಲಿ ಇದ್ದಂಥ ವಾಚ್ಯಾರ್ಥದ ಮಟ್ಟದ ಬಂಧ, ತರ್ಕಬದ್ಧತೆ ಕಡಿಮೆಯಾಗಲಾರಂಭಿಸಿತು, ಒಂದು ವ್ಯಂಗ್ಯಾರ್ಥಕ್ಕೆ ಪ್ರಾಮುಖ್ಯತೆ ಕೊಡಲೆಂದೇ ರೂಪುಗೊಂಡ ಈ ಕೃತಿಗಳನ್ನು ಓದಿದರೆ ಭಗ್ನ ಪ್ರತಿಮೆಗಳ ಸಮುಚ್ಚಯದಂತೆ ಕಾಣುತ್ತಿತ್ತು. ನವ್ಯ ಕಾವ್ಯದ ಪ್ರಮುಖ ಕಲಾಕೃತಿಗಳನ್ನು ನೋಡಿದರೆ ಅವು ವಾಚ್ಯದ ಮಟ್ಟದಲ್ಲಿ ಭಗ್ನ ಪ್ರತಿಮೆಗಳ ಸಮುಚ್ಚಯದಂತೆ ಕಂಡರೂ ಆ ಪ್ರತಿಮೆಯ ಛಿದ್ರಗಳು ತಮ್ಮಿಂದ ತಾವೇ ದೇದಿಪ್ಯಮಾನವಾಗಿ ಮಿನುಗುವ ಶಕ್ತಿ ಹೊಂದಿದ್ದೇವೆಂಬುದನ್ನು ಅಡಿಗರ ಅನೇಕ ಕೃತಿಗಳಲ್ಲಿ

ಕಾಣಬಹುದು. ಆದರೆ ಈ ಮಿನುಗುವಿಕೆಯ ಅರ್ಥವಂತಿಕೆಗೆ ಆ ಪ್ರತಿಮೆಗಳಿಂದ ಹೊಮ್ಮುವ ಧ್ವನಿ ಅಥವಾ ಪ್ರಬಂಧ ಧ್ವನಿ ಅಗತ್ಯವಾಗಿತ್ತು. ಆಗ ಮೂಡಿದ, ಜನಸಾಮಾನ್ಯರಿಗೆ ನವ್ಯಕಾವ್ಯ ಅರ್ಥವಾಗುವುದಿಲ್ಲ ಎಂಬ ಸಾರ್ವತ್ರಿಕ ಟೀಕೆಗೆ ಮುಖ್ಯ ಕಾರಣ ಕೃತಿಯ ಧ್ವನಿಶಕ್ತಿಗೆ ಬರಹಗಾರರು ಕೊಟ್ಟ ಅತಿ ಪ್ರಾಧಾನ್ಯತೆ ಒಂದು.'' (ತೇಜಸ್ವಿ ಲೋಕ, ಪುಟ- ೧೧೮, ತೇಜಸ್ವಿಯವರ ಪ್ರತಿಕ್ರಿಯೆ, ಸಂ : ಡಿ.ವಿ. ಪ್ರಹ್ಲಾದ್)

ತೇಜಸ್ವಿಯವರು ಹೇಳುವಂತೆ ಧ್ವನ್ಯರ್ಥವು ವಾಚ್ಯಾರ್ಥದ ವಿಸ್ತರಣೆಯಾಗಿ ಬರಬೇಕೇ ಹೊರತು ಅದರ ಅರ್ಥವಂತಿಕೆಯನ್ನು ಹೆಚ್ಚಿಸಲು ನಾವು ಆರೋಪಿಸಿದ್ದಾಗಿರಬಾರದು ಎಂದು ತೇಜಸ್ವಿಯವರು ವಾಚ್ಯಾರ್ಥ, ವ್ಯಂಗ್ಯಾರ್ಥದ ಬಗ್ಗೆ ಕಾವ್ಯಮೀಮಾಂಸಕರಾಗಿ, ಭಾಷಾಮೀಮಾಂಸಕರಾಗಿ ವಾದ ಮಂಡಿಸುತ್ತಾರೆ. ಈ ಮೇಲಿನ ಕಾರಣದಿಂದಲೇ ತೇಜಸ್ವಿಯವರ ಸಾಹಿತ್ಯದ ಭಾಷೆ ವೈನೋದಿಕವಾಗಿ, ಹಾಸ್ಯಮಿಶ್ರಿತವಾಗಿ ಕಂಡಬರುತ್ತದೆ. ಎಂತಹ ಗಂಭೀರ ವಿಷಯಗಳನ್ನೇ ಆಗಲಿ ಸರಳವಾಗಿ ತಲುಪಿಸುವ ಉದ್ದೇಶದಿಂದ ತೇಜಸ್ವಿಯವರು ನವಿರು ಹಾಸ್ಯಮಿಶ್ರಿತ ಭಾಷೆಯನ್ನು ಆಯ್ಕೆ ಮಾಡಿಕೊಂಡರು ಎಂದು ಹೇಳಬಹುದು.

ತೇಜಸ್ವಿಯವರ ಕಾದಂಬರಿಗಳಲ್ಲಿ ಓದುಗರು ವಾಚ್ಯದ ಧ್ವನಿಯಲ್ಲಿಯೇ ಅದರ ಅರ್ಥವನ್ನು ಗ್ರಹಿಸಬಲ್ಲರು. ಹಾಸ್ಯದ ಹಿಂದಿನ ಗಂಭೀರತೆಯನ್ನು ಹುಡಕುವುದು ವಾಚ್ಯದಲ್ಲಿರುವ 'ಧ್ವನ್ಯಾರ್ಥ'ದ ಮುಖಾಂತರವೇ. ಧ್ವನ್ಯಾರ್ಥವು ವಾಚ್ಯರ್ಥದ ವಿಸ್ತರಣೆಯಾಗಿ ಕಂಡುಬರುತ್ತದೆಯೇ ವಿನಃ ಅದರ ಅರ್ಥವಂತಿಕೆಯನ್ನು ಆರೋಪಿಸಲು ಬರುವುದಿಲ್ಲ ಎಂಬುದು ವೇದ್ಯವಾಗುತ್ತದೆ.

ತೇಜಸ್ವಿ ತಮ್ಮ ಕಾದಂಬರಿಗಳಲ್ಲಿ ಬಳಸುವ ಭಾಷೆಯನ್ನು ಯಾವುದೇ ಮುಜುಗರವನ್ನು ಕಾಣದೆ ಅತ್ಯಂತ ವಸ್ತುನಿಷ್ಠವಾಗಿ ವರ್ಣಿಸುತ್ತಾರೆ. ತೇಜಸ್ವಿಯವರ ಭಾಷೆಯು ವಾಸ್ತವಿಕತೆಯನ್ನು ಕಟ್ಟಿಕೊಡುವಲ್ಲಿ ತನ್ನದೇ ಆದ ಮಹತ್ವದ ಪಾತ್ರವನ್ನು ವಹಿಸುತ್ತದೆ. ತೇಜಸ್ವಿಯವರು ತಮ್ಮ ಸಾಹಿತ್ಯದಲ್ಲಿ ಬಳಸುವ ವಿಶಿಷ್ಟ ಭಾಷೆಯಿಂದಾಗಿ ತಮ್ಮನ್ನು ಗುರ್ತಿಸಿಕೊಂಡಿದ್ದಾರೆ. ತೇಜಸ್ವಿಯವರ ಭಾಷೆಯ ಬಗ್ಗೆ ಯು.ಆರ್. ಅನಂತಮೂರ್ತಿಯವರು ಹೇಳುವಂತೆ ''ತೀವ್ರ ಕಾಳಜಿಯನ್ನು ತುಸು ಉಡಾಫೆಯಾಗಿ ನೋಡಲು ಸಾಧ್ಯವಾದರೆ ಅದರಿಂದ ನೆಮ್ಮದಿ ದೊರೆಯುತ್ತದೆ. ಅಂತಹ ಭಾಷೆಯನ್ನು ತೇಜಸ್ವಿ ತಮ್ಮ ಬರಹದಲ್ಲಿ ಬಳಸಿದರು. ತೇಜಸ್ವಿ ಅವರ ಉಡಾಫೆ ನವಿರು ಹಾಸ್ಯದಿಂದ

ಕೂಡಿದ್ದು ಬದುಕಿನ ಸೂಕ್ಷ್ಮಗಳನ್ನು ಒಳಗೊಂಡಿದೆ. ಕವಿಯ ಅಹಂಕಾರ ಮೀರಿದ ಸ್ಥಿತಿಯನ್ನು ಇದು ತೋರಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ತೇಜಸ್ವಿಯವರು ಭಾರತೀಯ ಸಮಾಜದ ಗಂಭೀರ ಸಮಸ್ಯೆಗಳನ್ನು ನವಿರು ಹಾಸ್ಯದಿಂದ ಕೂಡಿದ ಭಾಷೆಯಿಂದ ವ್ಯಕ್ತಪಡಿಸಿದ್ದಾರೆ. ಇಂತಹ ಹಾಸ್ಯಮಿಶ್ರಿತ ಭಾಷೆಯನ್ನೇ ಒಳಗೊಂಡಿರುವ ಚಿಂತನೆಗಳನ್ನು ಓದುಗರು ಅರ್ಥೈಸಿಕೊಂಡು ಸ್ಪಂದಿಸುವ ತುರ್ತು ಇಂದು ಎದುರಾಗಿದೆ.

''ದೊಂಬಿ ಮುಷ್ಕರ ಮಾಡೋದಕ್ಕೆಲ್ಲಾ ಸಂಬಂಧ ನೋಡ್ತಾರೇನೋ ! ಈಗ ಮುಷ್ಕರ ಮಾಡ್ತಿರೋನು ನಿನ್ನ ಮಾವದಿಕ್ಕಳಾ ? ಭಾವದಿಕ್ಕಳಾ ? ಶೆಡ್ಡುಕರಾ ? ಬೀಗರಾ? ಒಟ್ರಾಸಿ ಜಯ್‌ಕಾರ ಹಾಕ್ತ ಬೀದಿಗಿಳಿತಾರೆ ! ಮುಷ್ಕರ ಬೇಕಾರೆ ಮಾಡ್ಕಳಿ, ಸದ್ಯ ಲಾಠೀಚಾರ್ಜು, ಗೋಲಿಬಾರು, ಆಗದಿದ್ದ ಹಾಗೆ ಮಾಡ್ರಿ. ದಾರೀಲಿ ಹೋಗೋ ಪಾಪದವರ ಪ್ರಾಣಕ್ಕೆ ಸಂಚಕಾರ ತಂದೀರಿ! ಎಂದು ನಿರುತ್ಸಾಹದ ದನಿಯಲ್ಲಿ ಎಚ್ಚರಿಕೆ ಹೇಳಿದರು.'' (ಮಾಯಾಲೋಕ-೧, ಪುಟ-೨೨೯, ಲೇ. ಪೂರ್ಣಚಂದ್ರ ತೇಜಸ್ವಿ) ರೋಗಗ್ರಸ್ತ ಸಮಾಜದಲ್ಲಿ ಚಳುವಳಿ, ಮುಷ್ಕರ, ಇವುಗಳು ನಿರ್ದಿಷ್ಟ ಉದ್ದೇಶಕ್ಕಾಗಿ ನಡೆಯದೆ ಉಡಾಫೆಯ ಮನೋಭಾವದಿಂದ ನಡೆಯುತ್ತವೆ. ಮುಷ್ಕರ ಮತ್ತು ಪ್ರತಿಭಟನೆಯ ಸ್ವರೂಪವನ್ನು ಕುರಿತಾದಂತೆ ತೇಜಸ್ವಿ ಕಾದಂಬರಿಗಳಲ್ಲಿ ಆಡುಮಾತಿನಲ್ಲಿಯೇ ಅಭಿಪ್ರಾಯ ವ್ಯಕ್ತವಾಗುತ್ತದೆ. ಆದರೆ ಅದರೊಳಗಿರುವ ಭಾರತೀಯ ಸಮಾಜದ ಹುಳುಕುಗಳು ಸೂಕ್ಷ್ಮವಾಗಿ ನೋಡಿದಾಗ ಕಂಡುಬರುತ್ತವೆ.

ಕಾಂಪ್ರ ಬಂದವನು ದೂರದಲ್ಲಿ ನಿಂತು ನಮಸ್ಕಾರ ಮಾಡಿದನು. ''ಮಳೆಯಲ್ಲಿ ನಿಲ್ಲಬೇಡ, ಸೂರಿನ ಮರೆಗೆ ಬಾ'' ಎಂದು ಕರೆದರು. ''ಏನು ಯಾರು ಈ ದಿನ ಕೆಲಸಕ್ಕೆ ಹೊರಡೋದಿಲ್ಲೇನು ? ಎಂದು ಕೇಳಿದರು.ಹ್ಯಾಗೆ ಹೊರಡೋದಯ್ಯ, ಮರಸರ ಕುಳುಪ ಎಲ್ಲಾ ಯಾರೊಬ್ಬರು ಬಿಡಾರದಾಗೆ ಇಲ್ಲ, ನಿನ್ನೆ ಮಳೆಯಲ್ಲೇ ಲಾಟೀನು ತಗೊಂಡು ಎತ್ತಲೋ ಹೋದರು. ನಾನು ಮೀನುಗೀನು ಹಿಡಿಯೋದಕ್ಕೆ ಹೋದರೇನೋ ಎಂದು ಮಾಡಿದೆ. ಆದರೆ ನೋಡಿದರೆ ಬೆಳಗಾದರೂ ಯಾರು ಬಂದಿಲ್ಲ. ಎಲ್ಲಿ ಯಾವನಿಗೆ ಶರಾಬು ಕಾಸಿಕೊಡಲಿಕ್ಕೆ ಹೋದರೋ ? ಎಲ್ಲರಿಗೂ ಹಗಲು ಕೆಲಸ ಆದರೆ ಈ ನನ್ನ ಮಕ್ಕಳಿಗೆ ಇರುಳು ಕೆಲಸ ಎಂದು ಅವರ ಬಗೆಗಿನ ತಿರಸ್ಕಾರವನ್ನೆಲ್ಲಾ ಕಾರಿದನು''. (ನಿಗೂಢ ಮನುಷ್ಯರು, ಪುಟ-೯೮-೯೯, ಲೇ. ಪೂರ್ಣಚಂದ್ರತೇಜಸ್ವಿ)

'ನಿಗೂಢ ಮನುಷ್ಯರು'ಕಾದಂಬರಿಯಲ್ಲಿ ಬರುವ ಗೋಪಾಲಯ್ಯ ಎಂಬ ಶಿಷ್ಟ ಪಾತ್ರವು ಕಾಂಪ್ರ ಎಂಬ ಅಂಚಿನ ಪಾತ್ರದ ಜೊತೆಯಲ್ಲಿ ಸಂಭಾಷಣೆ ನಡೆಸುವಲ್ಲಿ ಭಾಷೆಯ ಪಾತ್ರ ಮಹತ್ವದಾಗಿದೆ. ಕಾಂಪ್ರನು ಕೋಪದಿಂದ ಮರಸರ ಮತ್ತು ಕುಳುಪ ಎಂಬುವವರ ಬಗ್ಗೆ ವಿವರಿಸಿದನು. ಮಲೆನಾಡಿನಲ್ಲಿ ಬಳಸುವ 'ಶರಾಬು'ಪಾನೀಯವು ಕೆಳ ಸಂಸ್ಕೃತಿಗಳ ಮಧ್ಯ ಎಂದು ಕಾಂಪ್ರನ ಮಾತುಗಳಿಂದಲೇ, ಮರಸರ ಕುಳುಪ ಮತ್ತು ಕಾಂಪ್ರನು ಕೆಳವರ್ಗಕ್ಕೆ ಸೇರಿದವರು ಎಂದು ತಿಳಿಯಬಹುದಾಗಿದೆ. ಶಿಷ್ಟ ಪಾತ್ರವಾದ' ಗೋಪಾಲಯ್ಯನವರಿಗೆ ಕೆಳವರ್ಗದ ಪಾತ್ರಗಳ ಜೀವನ ಕ್ರಮವು ಕಾಂಪ್ರನ ಮಾತುಗಳಿಂದ ತೆರೆದುಕೊಳ್ಳುತ್ತದೆ.'' ಕಾರು ಸಿಕ್ಕಿಕೊಂಡು ನಿಂತಿದ್ದ ಜಾಗಕ್ಕೆ ಬಂದರು. ನಿರಾಸೆಯ ಪ್ರತೀಕದಂತೆ ಕಾರು ಚಕ್ರಗಳಲ್ಲೂ ಕೆಸರಲ್ಲಿ ಹೂತು ನಿಂತಿತ್ತು. ಮಳೆಯ ಇರಿಚಲು ಗಾಳಿಯಲ್ಲಿ 'ಅಸಡಾ ಬಸಡಾ' ಹೊಡೆದು ಅದರ ಒಳಭಾಗವೆಲ್ಲಾ ನೀರು ತುಂಬಿತ್ತು.'' (ನಿಗೂಢ ಮನುಷ್ಯರು, ಪು-೧೧೩, ಲೇ. ಪೂರ್ಣಚಂದ್ರ ತೇಜಸ್ವಿ)

''ಪ್ಯಾರಾ'' ಎಲ್ಲಾ ಸುಳ್ಳು ಇಂತ ಬೆಳದಿಂಗ್ಳು ಇದೇ ಕಿವಿ ಸರಿಯಾದ ದಾರೀಲಿ ಕರಕೊಂಡು ಹೋಗಿ ಕರಕೊಂಡು ಬಂದಿದ್ದಾನೆ. ಸರಿಯಾಗಿ ಒಂದು ದರಾಮು ಷರಾಬು ಏರಿಸಿಕೊಂಡು ''ಅಡ್ರಾಬಡ್ರಾ'' ಕಾಲಾಕ್ತಾ ಬಂದ್ರೆ ಇನ್ನೇನಾಗ್ತದೆ ಎಂದು ಗುಟ್ಟುಬಿಟ್ಟ (ಕರ್ವಾಲೊ, ಪು-೫೭, ಲೇ. ಪೂರ್ಣಚಂದ್ರತೇಜಸ್ವಿ)

ನೋಡಿ ಕರ್ವಾಲೊ ಕಾದಂಬರಿಯಲ್ಲಿ ಮಂದಣ್ಣ 'ಅಡ್ರಾಬಡ್ರಾ' ಕಾಲು ಹಾಕುತಾ ಬರುತ್ತಿದ್ದ ಅಂತ ಒಂದು ಸಾಲು ಬರುತ್ತೆ. ಅದನ್ನೇ ಇಂಗ್ಲೀಷಿಗೆ ಅನುವಾದ ಮಾಡಬೇಕಾದರೆ ಎಷ್ಟು ಸರ್ಕಸ್ ಮಾಡಿದರು. ಅಂದರೆ ಅವೆಲ್ಲಾ ಇಂಗ್ಲೀಷಲ್ಲಿ ಬರಲ್ಲ. ಆ ಉಕ್ತಿಭಂಗಿ ಬೇರೆ ಭಾಷೆಯಲ್ಲಿ ಬರೋದೆ ಇಲ್ಲ ಕಣ್ರೀ ಎಂದರು ತೇಜಸ್ವಿ. ಅವರು ಉಕ್ತಿಭಂಗಿ ಎಂದಾಗ ಏರಿದ ಹುಬ್ಬು ಹಾಗೂ ಮುಖದಲ್ಲಿ ಮೂಡಿದ ಬೆರಗು ನನ್ನಲ್ಲಿ ಹಾಗೇ ಕೂತಿದೆ. (ಕನ್ನಡ ಟೈಮ್ಸ್ ಬರಹಗಳು, ಶೀರ್ಷಿಕೆ : ತೇಜಸ್ವಿ ಕೊನೆಯ ಭೇಟಿ ಮತ್ತು ಮರುಬೇಟಿ, ಪುಟ-೬೧, ಲೇ. ನಟರಾಜ್ ಹುಳಿಯಾರ್)

ನಿಗೂಢ ಮನುಷ್ಯರು ಕಾದಂಬರಿಯಲ್ಲಿ ಬರುವ ಅಸಡಾಬಸಡಾ ಕರ್ವಾಲೊ ಕಾದಂಬರಿಯಲ್ಲಿ ಬಂದಿರುವ ಉಕ್ತಿಭಂಗಿ ಅಡ್ರಾಬಡ್ರಾ ಎನ್ನುವುದು ವಿಶಿಷ್ಟವಾದುದು. ಈ ಉಕ್ತಿಭಂಗಿಯನ್ನು ಇಂಗ್ಲೀಷ್‌ಗೆ ತರ್ಜುಮೆ ಮಾಡಲು ತುಂಬ ಕಷ್ಟಪಟ್ಟರು ಎಂದು ತೇಜಸ್ವಿಯೇ ಸ್ವತಃ ಹೇಳಿದ್ದಾರೆ.

ಉಕ್ತಿಭಂಗಿ ಎನ್ನುವುದು ಒಂದು ಭಾಷೆಯ ವಿಶಿಷ್ಟ ಶಕ್ತಿ, ಉಕ್ತಿಭಂಗಿಯು ನಮ್ಮ ಸಂಸ್ಕೃತಿಯನ್ನು ತೆರೆದಿಡುವುದರಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಈ ಉಕ್ತಿಭಂಗಿ ಬೇರೆ ಭಾಷೆಯಲ್ಲಿ ಬರೋದೆ ಇಲ್ಲ ಕಣ್ರೀ ಎಂದು ಖಡಾಖಂಡಿತವಾಗಿ ತೇಜಸ್ವಿ ಹೇಳುವುದು ಇದು ನಮ್ಮ ಕನ್ನಡ ಭಾಷೆಯ ವಿಶಿಷ್ಟ ಗುಣ ಮತ್ತು ತೇಜಸ್ವಿಯವರು ಬಳಸುತ್ತಿದ್ದ ಭಾಷೆಯ ವಿಶಿಷ್ಟತೆ ಕೂಡ ಭಾಷೆ ಎನ್ನುವುದು, ಸಂಸ್ಕೃತಿಯನ್ನು ತನ್ನ ಒಡಲಿನಲ್ಲಿ ಜೀವಂತವಾಗಿ, ಘನೀಕರಿಸಿಕೊಂಡಿರುತ್ತದೆ. ಅನುವಾದ ಮುಂತಾದ ಕೆಲಸಗಳಲ್ಲಿ 'ಸಂಸ್ಕೃತಿ ವಿಶಿಷ್ಟ' ಉಕ್ತಿಭಂಗಿ ಆಚರಣೆಗಳನ್ನು ಯಥಾವತ್ ಆಗಿ ತರುವುದು ಸಾಧ್ಯವಾಗುವುದಿಲ್ಲ. ಇದು ನಮ್ಮ ಭಾಷೆಯುಸಂಸ್ಕೃತಿಯ ಅನನ್ಯತೆಯಾಗಿದೆ.

'ರಾಮಯ್ಯ ಅದರೊಳಗೆ ಇದ್ದಿದ್ದು ಜೇನು ತುಪ್ಪ ಹೌದೇನು ನಿಜಹೇಳು' ಎಂದೆ. 'ಧರ್ಮ ಸ್ಥಳದ ದೇವ್ರಾಣೆಗೂ ಹೇಳ್ತೀನಿ ಆ ಸಾರಿ ಬಂದಾಗ ಮಂದಣ್ಣ ತಂದಿದ್ದ ಜೇನುತುಪ್ಪ ಸ್ವಾಮಿ. ಅದು ಕಾಸರಿಕನ ಹೂವಿನ ಜೇನುತುಪ್ಪ ಇರಬೋದು ಸ್ವಲ್ಪ ವಾಸನೆ ಬರ್ತಿತ್ತು! ಪೋಲಿಸ್ನೋರಿಗೇನಾಗಬೇಕು, ಲಂಚ ಸಿಕ್ಲೀ ಅಂತ ಇದೆಲ್ಲಾ 'ಪಲಾನು' ಎಂದ (ಕರ್ವಾಲೊ, ಪುಟ-೨೩, ಲೇ. ಪೂರ್ಣಚಂದ್ರತೇಜಸ್ವಿ)

ತೇಜಸ್ವಿ ಕಾದಂಬರಿಗಳಲ್ಲಿ ಭಾಷೆ ವ್ಯಾಕರಣಾಂಶಗಳನ್ನು ಮೀರಿ ಬಳಕೆಯಾಗುತ್ತದೆ. ಆದ್ದರಿಂದಲೇ ಅದು ಒಂದು ಸಂಸ್ಕೃತಿಯನ್ನು ಕಟ್ಟಿಕೊಡಲು ಯಶಸ್ವಿಯಾಗುತ್ತದೆ. ಕರ್ವಾಲೊ ಕಾದಂಬರಿಯಲ್ಲಿ ಬರುವ ರಾಮಯ್ಯನೆಂಬ ಅನಕ್ಷರಸ್ತ ಹಳ್ಳಿಯವನ ಭಾಷೆಯಲ್ಲಿ 'ಪಲಾನು' ಎಂಬ ಇಂಗ್ಲೀಷ್ ಪದವು ರೂಪಾಂತರಗೊಂಡು ಬಳಕೆಯಾಗುತ್ತದೆ. ಕನ್ನಡದಲ್ಲಿ ಅದಕ್ಕೆ ಅರ್ಥವೇ ಇಲ್ಲದೆ ಹೋದರು ವಾಕ್ಯದ ಹಿನ್ನೆಲೆಯಿಂದ, ಸಂದರ್ಭದ ಹಿನ್ನೆಲೆಯಿಂದ ಅದನ್ನು ಅರ್ಥೈಸಿಕೊಳ್ಳಬಹುದು. ಅಭಿವ್ಯಕ್ತಿಗೆ ಯಾವುದೇ ತೊಡಕನ್ನು ಈ ರೀತಿಯ ಪದಗಳು ಒಡ್ಡುವುದಿಲ್ಲ. ಇದು ತೇಜಸ್ವಿಯವರ ಗ್ರಾಮೀಣ ಪರಿಸರದಲ್ಲಿ ತನ್ನಷ್ಟಕ್ಕೆ ತಾನೇ ಬೆಳೆದು ಬಂದಿರುವ ಪಾತ್ರಗಳು ಅವುಗಳ ಜೀವನ ಕ್ರಮವನ್ನು ಅವುಗಳ ಭಾಷೆಯಲ್ಲಿಯೇ ಕಟ್ಟಿಕೊಡುವ ಕ್ರಮ ವಿಶಿಷ್ಟವಾದದು. 'ಮಿಸ್ಟರ್' ಎಂದು ನನ್ನನ್ನು ತಡೆದು 'ಮೈ ಡಿಯರ್ ಯಂಗ್ ಮ್ಯಾನ್' ಈ ಮಾತನ್ನು ನೀವು ಸೀರಿಯಸ್ಸಾಗಿ ಹೇಳಿಲ್ಲಾಂತ ತಿಳಿದ್ದೀನಿ. ನನ್ನ ಕೆಲಸ ಇಲ್ಲಿ ನಿಮ್ಮಂಥೋರ ತಾಪತ್ರಯಗಳನ್ನು ನೋಡಿಕೊಳ್ಳೋದು. ಕೈಲಾದ ಸಹಾಯ ಮಾಡೋದು ಆದ್ದರಿಂದ ನನಗೆ ತೊಂದರೆ ಕೊಡುವುದು ನಿಮ್ಮ ಹಕ್ಕು ಎಂದರು'' (ಕರ್ವಾಲೊ, ಪುಟ-೨೦, ಲೇ. ಪೂರ್ಣಚಂದ್ರತೇಜಸ್ವಿ)

ಕರ್ವಾಲೊ ಕಾದಂಬರಿಯ ಶಿಷ್ಟ ಪಾತ್ರವಾದ ಕರ್ವಾಲೊರವರು ತಮ್ಮ ವಿದ್ಯಾಭ್ಯಾಸದ ಮತ್ತು ಮಾಡುವಂತ ವೃತ್ತಿಗೆ ಅನುಗುಣವಾಗಿ ಇಂಗ್ಲೀಷ್ ಪದಗಳನ್ನು ಬಳಸುತ್ತಾರೆ. 'ಮಿಸ್ಟರ್' ಮೈ ಡಿಯರ್ ಯಂಗ್‌ಮ್ಯಾನ್ ಸೀರಿಯಸ್ಸಾಗಿ ಗ್ರಾಮೀಣ ಸಂಸ್ಕೃತಿಗೆ ಹೊರಗಿನಿಂದ ಬಂದಂತಹ ಶಿಕ್ಷಿತವ್ಯಕ್ತಿಗಳು ಬಳಸುವ ಭಾಷೆಯಂತೆ ಕರ್ವಾಲೊರವರ ಭಾಷೆಯು ಕಂಡುಬರುತ್ತದೆ. ಇಂಗ್ಲೀಷ್ ಪದಗಳನ್ನು ಬಳಸುವುದರ ಮೂಲಕ, ಇಂಗ್ಲೀಷ್ ಪದಗಳ ಜೊತೆಗೆ ಕನ್ನಡದ ಪದಗಳನ್ನು ಸೇರಿಸಿ ವಾಕ್ಯ ರಚಿಸಿ ಮಾತಾಡುವುದರ ಮೂಲಕ ಕರ್ವಾಲೊ ವಿಶಿಷ್ಟರೆನಿಸಿದ್ದಾರೆ. 'ಅವನಿಗೆ ಹೊಡೆಯೋದಕ್ಕೇಂತ ಹೋದರೆ ಇವನಿಗೆ ಯಾಕಯ್ಯ ಪುಕ್ಕಲು ಹತ್ತಿಕೊಂಡಿತು ?

''ಅಲ್ಲಾ ಇವನಿಗೆ ಯಾರಾದರೂ ಚೂರಿ ತೋರಿಸಿದರೆ ಇನ್ನು ಯಾವತರ ಓಡೋಗಬಹುದು ?''

''ತಥ್ ಹೆದರು ಪುಕ್ಲ''

''ಹೇತ್ಲಾಂಡಿ''

''ಸಿಕ್ಲೀ ಅವನಿಗೆ''

ಇತ್ಯಾದಿ ಇತ್ಯಾದಿ ಬಯ್ಗುಳ ಭರಿತ ಸಂಭಾಷಣೆಗಳು ಅವರು ಸಾಗಿದ ದಿಕ್ಕಿನಿಂದ ಬಂದವು. ತೇಜಸ್ವಿಯವರ ಕಾದಂಬರಿಯಲ್ಲಿ ಬರುವ ಪಾತ್ರಗಳು ಮಲೆನಾಡಿನ ಕಡೆಯ ಗ್ರಾಮೀಣ ಪ್ರದೇಶದ ಪಾತ್ರಗಳಾಗಿರುವುದರಿಂದ ಆಡು ಭಾಷೆಯಲ್ಲಿ ಬಯ್ಗುಳಗಳು ಸರಾಗವಾಗಿ ಹರಿದು ಬರುತ್ತವೆ. ಆಡುಭಾಷೆಯಲ್ಲಿ ಸಹಜವೆಂಬಂತೆ ಬಯ್ಗುಳಗಳು ಕಂಡುಬರುತ್ತವೆ. ಓದುಗರಿಗೆ ಅಶ್ಲೀಲವೆನಿಸಿದರೂ ಗ್ರಾಮೀಣ ಭಾಷೆಯಲ್ಲಿ ಕಂಡುಬಂದಿರುವ ಈ ಬಯ್ಗುಳಗಳು ಗ್ರಾಮೀಣ ಭಾಷೆಯ ವಿಶಿಷ್ಟ ಲಕ್ಷಣ ಎನ್ನಬಹುದು.

''ಲೌಡಿ ಮಕ್ಕಳಿಗೆ ಪಂಚಾಯಿತಿಗೆ ಹಾಕ್ಸಿ ಸರಿಯಾಗಿ ದಂಡ ಹಾಕಿಸಬೇಕು''.

''ಇನ್ನಾರ್ದುರ್? ಮುಕ್ಲಿ ಬಗ್ಲಿ ದುಡಿಯಾಕಾಗದೆ ಕಳ್ಳಬಟ್ಟಿ ಬೇಸಿಕೊಂಡು ಕಾಲಾಹಾಕ್ತಿದ್ದಾರಲ್ಲ ಆ ಊರಳ್ಳಿ ಕಳ್ಸೂಳೆ ಮಕ್ಳು''

''ಹುಚ್ಚು ಮುಂಡೆಗಂಡಾ ! ನಂಗೇನು ತಲೆಕೆಟ್ಟಿಯಿಲ್ಲ.''

ಕರ್ವಾಲೊ ಕಾದಂಬರಿಗಳಲ್ಲಿಯೂ ಸಹ ಇದೇ ರೀತಿಯಾದಂತಹ ಬಯ್ಗುಳಗಳು ವ್ಯಕ್ತವಾಗಿವೆ. ಅರವತ್ತರ ದಶಕದ ನಂತರ ಸಾಂಸ್ಕೃತಿಕ ಅಧ್ಯಯನದ ಸ್ವರೂಪವು ಬದಲಾದ

ನಂತರ ಬಯ್ಗುಳಗಳನ್ನು ಸಂಸ್ಕೃತಿಯ ವ್ಯಾಪ್ತಿಗೆ ಸೇರಿಸಬಹುದು. ಈ ನಿಟ್ಟಿನಲ್ಲಿ ಅಧ್ಯಯನಗಳು ಸಹ ನಡೆದಿವೆ. ಅಂಚಿನ ಪಾತ್ರಗಳ ಜೀವನ ಕ್ರಮವನ್ನು ಕಟ್ಟಿಕೊಡುವ ಸಂದರ್ಭದಲ್ಲಿ ''ಭಾಷೆ'' ನಿರ್ಧಾರಕ ಶಕ್ತಿಯಾಗಿ ಕೆಲಸಮಾಡುತ್ತದೆ. ತೇಜಸ್ವಿಯವರು ಈ ಬಯ್ಗುಳಗಳನ್ನು ನಿರೂಪಕನ ಭಾಷೆಯಲ್ಲಿ ನಿರೂಪಿಸುತ್ತಾ 'ಅಶ್ಲೀಲ ಪದಗಳು' ಎಂದು ಮಾತ್ರ ನಿರೂಪಿಸಿದ್ದರೆ ಗ್ರಾಮೀಣ ಸಂಸ್ಕೃತಿಯ ಮೇಲ್ಪದರವಷ್ಟೇ ನಮಗೆ ಕಾಣಸಿಗುತ್ತಿತ್ತು. ಆದರೆ ಗ್ರಾಮೀಣ ಪಾತ್ರಗಳಿಗೆ ಭಾಷೆಯಲ್ಲಿ ಸ್ವಾತಂತ್ರ್ಯವನ್ನು ನೀಡಿರುವುದರಿಂದ ಆ ಪಾತ್ರಗಳ ಒಳಗಿನ ಅನುಭವ ತೀವ್ರತೆಯು ವ್ಯಕ್ತವಾಗಲು ಅವಕಾಶ ದೊರಕಿದೆ.

'ಪ್ಯಾರ ಏನ್ಮಂದಣ್ಣಾ ? ನಿಕಾ ಆಯ್ತಾ! ನಮ್ಮ ಜಾತಿಗೆ ಸೇರಿದರೆ ನಾಕು ಮದುವೆ ಆಗಬೋದು ನೋಡು ಎಂದ ' 'ಏ ಸುವ್ವರ್ ತಿಂತೀಯ ನಿನಗೆಂತದೋ ಜಾತಿ' ಎಂದು ಮಂದಣ್ಣ ಟೀಕಿಸಿದ.

'ಮಂದಣ್ಣ ನಿಂಗವೆಲ್ಲಾ ಗೊತ್ತಾಗಾಕಿಲ್ಲ ನಮ್ಮ ಜಾತೀಲಿ ನಾಕು ನಿಕಾ ಮಾಡಿಕೊಂಡರೆ ಮೆಕ್ಕಾ ಯಾತ್ರೆ ಹೋಗಿ ಬಂದಂಗೆ! ''(ಕರ್ವಾಲೊ, ಪುಟ-೫೭, ಲೇ. ಪೂರ್ಣಚಂದ್ರ ತೇಜಸ್ವಿ)

ಗ್ರಾಮೀಣ ಪರಿಸರದ ಹಿನ್ನೆಲೆಯಲ್ಲಿ ಯಾವುದೇ ಜಾತಿ ಧರ್ಮದ ಬೇಧವಿಲ್ಲದೆ ಬದುಕುತ್ತಿರುವುದನ್ನು ಪ್ಯಾರ ಮತ್ತು ಮಂದಣ್ಣನ ಮಾತುಗಳಿಂದ ತಿಳಿಯಬಹುದು. ಮಂದಣ್ಣ ಪ್ಯಾರನನ್ನು ಟೀಕಿಸುತ್ತಿದ್ದರೂ ಆ ಟೀಕೆ ಎನ್ನುವುದು ಸಲುಗೆಯ ಸಲುವಾಗಿ ಮೂಡಿ ಬಂದದ್ದಾಗಿದೆ. ನಗರ ಪರಿಸರದಲ್ಲಿ ಕೋಮು ಗಲಭೆ ಧರ್ಮದ ಪರವಾಗಿ ನಡೆಯುತ್ತಿರುವ ಕಾಳಗ, ಇವುಗಳ ಮಧ್ಯೆ ಪ್ಯಾರ ಮತ್ತು ಮಂದಣ್ಣನಂತಹ ಪಾತ್ರಗಳು ನಮಗೆ ಮಾದರಿಯಾಗಿದೆ. ಮುಸ್ಲಿಂ ಸಮುದಾಯದ ಪ್ಯಾರ, ಹಿಂದೂ ಸಮುದಾಯದ ಮಂದಣ್ಣನ ಭಾಷೆಯು ಒಂದೇ ರೀತಿಯಾಗಿದ್ದು ಧರ್ಮ ಸಾಮರಸ್ಯಕ್ಕೆ ಕಾರಣವಾಗಿರುವುದನ್ನು ಅವರಿಬ್ಬರ 'ಆಡುಮಾತು' ಗಳಿಂದ ತಿಳಿಯಬಹುದು.

ತೇಜಸ್ವಿ ಕಾದಂಬರಿಗಳಲ್ಲಿ ಗಾದೆಗಳು ಸಮಯಕ್ಕೆ ತಕ್ಕಂತೆ ಪಾತ್ರಗಳ ಸ್ವಭಾವಕ್ಕೆ ತಕ್ಕಂತೆ ಸಂದರ್ಭದ ಹಿನ್ನಲೆಯಲ್ಲಿ ಮೂಡಿಬಂದಿರುವುದು, ತೇಜಸ್ವಿ ಕಾದಂಬರಿಗಳ ಮಹತ್ವವನ್ನು ಹೆಚ್ಚಿಸಿವೆ.

''ಹುಚ್ಚು ಬಿಡದೆ ಮದುವೆಯಾಗೋದಿಲ್ಲ, ಮದುವೆಯಾಗದೆ ಹುಚ್ಚು ಬಿಡೋದಿಲ್ಲ'' (ಕರ್ವಾಲೊ, ಪುಟ-೪೯, ಲೇ. ಪೂರ್ಣಚಂದ್ರ ತೇಜಸ್ವಿ)

ಇದು ಮಂದಣ್ಣನ ವಿಷಯಕ್ಕೆ ಸಂಬಂಧಪಟ್ಟ ಗಾದೆಯಾಗಿದೆ ಮಂದಣ್ಣ ನೌಕರಿ ಸಿಗುವವರೆಗೂ ಮದುವೆಯಾಗುವುದಿಲ್ಲ. ಮದುವೆಯಾಗದೆ ನೌಕರಿ ಸಿಗುವುದಿಲ್ಲ ಎಂಬ ಅರ್ಥದಲ್ಲಿ ಮೇಲಿನ ಗಾದೆಯು ಬಳಕೆಯಾಗಿದೆ.

''ಮಾಡಿದೋರ ಪಾಪ ಆಡಿದೋರ ಬಾಯಾಗಂತೆ'' (ಕರ್ವಾಲೊ, ಪುಟ-೪೪, ಲೇ. ಪೂರ್ಣಚಂದ್ರ ತೇಜಸ್ವಿ)

''ಹೆಣ್ಣ ಹೆತ್ತೋರ ಕಷ್ಟ ಸುಖ ಹೆಣ್ಣು ಹೆತ್ತೋರಿಗೆ ಗೊತ್ತು'' ಗ್ರಾಮೀಣ ಬದುಕಿನ ನಾನಾ ಮಜಲುಗಳನ್ನು, ಅವರು ಅನುಭವಿಸುವ ಕಷ್ಟಸುಖಗಳನ್ನು ಗಾದೆಗಳ ಮುಖಾಂತರ ಹಿಡಿದಿಟ್ಟಿದ್ದರು. ಅದೇ ರೀತಿಯಾಗಿ ಕರ್ವಾಲೊ ಕಾದಂಬರಿಯಲ್ಲಿ ಈ ಗಾದೆಗಳು ಬಳಕೆಯಾಗಿವೆ.

''ಕಳ್ಳನ ಮನಸ್ಸು ಹುಳ್‌ಹುಳ್‌ಗಂತೆ'' (ಪುಟ-೪೪, ಕರ್ವಾಲೊ) ಗಾದೆ ಮಾತುಗಳು ಬಳಕೆಯಾಗುವಾಗ ಗ್ರಾಮೀಣ ಸಂಪ್ರದಾಯದ ಭಾಷೆಯಂತೆ ಬಳಕೆಯಾಗುವುದು ವಿಶಿಷ್ಟವಾಗಿದೆ. ಜನ ಸಾಮಾನ್ಯರ ಬದುಕು ಭಾಷೆಗಳಲ್ಲಿ ಹಾಸು ಹೊಕ್ಕಾಗಿರುವಂತಹ ಗಾದೆಗಳು ಅವರ ಜೀವನ ಕ್ರಮವನ್ನು ಕಟ್ಟಿಕೊಡುತ್ತವೆ.



ಕೊಂದ ಪಾಪ ತಿಂದು ಪರಿಹಾರಂತೆ (ಕರ್ವಾಲೊ, ಪು-೧೨೫. ಲೇ. ಪೂರ್ಣಚಂದ್ರ ತೇಜಸ್ವಿ) ಯಾವುದೇ ಪ್ರಾಣಿಯನ್ನು ಕೊಲ್ಲುವುದು ಪಾಪದ ಸಂಕೇತ. ಅದೇ ಪ್ರಾಣಿಯನ್ನು ಬೇಯಿಸಿ ತಿಂದರೆ ಕೊಂದಂತಹ ಪಾಪವು ಪರಿಹಾರವಾಗುತ್ತದೆ. ಇದು ಗ್ರಾಮೀಣ ಬದುಕಿನಲ್ಲಿ ಇಂದಿಗೂ ಸಹ ಅಸ್ತಿತ್ವದಲ್ಲಿರುವ ಗಾದೆ ಮಾತಾಗಿದೆ. ಕೊಂದಂತಹ ಪಾಪವನ್ನು ತಿಂದುಕಳೆದುಕೊಳ್ಳುವುದು. ಗ್ರಾಮೀಣ ಜನರು ಪಾಪ ಪ್ರಜ್ಞೆಯನ್ನು ಹೊಂದಿದ್ದರು ಅದನ್ನು ಪರಿಹರಿಸಿಕೊಳ್ಳುವುದು, ಗ್ರಾಮೀಣ ಜನರು ಪಾಪ ಪ್ರಜ್ಞೆಯನ್ನು ಹೊಂದಿದ್ದರು ಅದನ್ನು ಪರಿಹರಿಸಿಕೊಳ್ಳುವ ಬಗ್ಗೆಯು ಚಿಂತಿಸುತ್ತಿದ್ದರು. 'ಈಗ ತಗೊಳ್ಳಿ ಏಲಕ್ಕಿ ಹೋಯ್ತು ಅಂತ ಏಲಕ್ಕಿ ಹನಾಲಿನ ಮರಗಳನ್ನೆಲ್ಲಾ ಮಾರಿ ಕೊಳ್ತಾರೆ ಮಗನ ಮದುವೆಗೆ ವರದಕ್ಷಿಣೆ ತೊಗೊಳ್ತಾರೆ ಮಗಳ ಮದುವೆಗೆ ಸಾಲಾ ಮಾಡ್ತಾರೆ, ಹಬ್ಬುತ್ತಾ ಹೋಗುತ್ತೆ ತಾಪತ್ರಯ ಇನ್ನಷ್ಟು ತೊಂದರೆ ರೇಜಿಗೆ1 ಮಧ್ಯ ಇದರ ಉಪಯೋಗದ ಪಡಕೊಳ್ಳೋ ಮತಾಂಧರು, ರಾಜಕಾರಣಿಗಳು! ದೇವರು ! ಮಸೀದಿ ! ಮೈಕು ! ಭಜನೆ! ದಳ್ಳುರಿ, ಹಬ್ಬುತ್ತಾ ಹೋಗುತ್ತೆ ಕೆಟ್ಟ ಮೇಲೆ ಬುದ್ಧಿ ಬಂತು ಅನ್ನೋ ಗಾದೆಯಿದೆಯಲ್ಲ. ತಪ್ಪು, ಕೆಡ್ತಾ ಕೆಡ್ತಾ ಬುದ್ಧಿನೂ

ಕೆಡ್ತಾ ರೋಗ ಜೋರಾಗ್ತಾ ಹೋಗುತ್ತೆ'' (ಚಿದಂಬರ ರಹಸ್ಯ, ಪುಟ-೫೪, ಲೇ. ಪೂಣಚಂದ್ರ ತೇಜಸ್ವಿ)

ಸಾಮಾಜಿಕ ಸ್ಥಿತಿಯು ಅದೋಲೋಕಕ್ಕೆ ಇಳಿಯುವುದು ಅದರಿಂದಾಗುವ ಅನಾಹುತಗಳಿಂದ ಜನಸಾಮಾನ್ಯರು ತಡವಾಗಿ ಎಚ್ಚೆತ್ತು ಕೊಳ್ಳುವುದನ್ನು ಪಾಟೀಲರು 'ಕೆಟ್ಟ ಮೇಲೆ ಬುದ್ಧಿ ಬಂತು' ಎಂಬ ಗಾದೆ ಮಾತಿನ ಮುಖಾಂತರ ಇಡೀ ಸನ್ನಿವೇಶವನ್ನು ವ್ಯಕ್ತಪಡಿಸಿದ್ದಾರೆ. ಗಾದೆ ಮಾತುಗಳು ಅನುಭವದ ಕಣಜಗಳು. ಗಾದೆ ಎಂಬುದು ಹಲವರ ಜ್ಞಾನ, ಒಬ್ಬನ ವಿವೇಕ ಎಂಬುವುದು ಸತ್ಯ, ಹಲವರ ಜ್ಞಾನ, ಒಬ್ಬನ ವಿವೇಕ ಎಂಬುವುದು ಸತ್ಯ, ಹಲವರ ಜ್ಞಾನದಿಂದ ಗಾದೆ ಮಾತುಗಳು ರೂಪಿತಗೊಂಡಿರುತ್ತವೆ. ಅದು ಕೆಸರೂರಿನ ಸಂಸ್ಕೃತಿಗೆ ತಕ್ಕಂತೆ, ಅವನತಿಯಾಗುತ್ತಿರುವ ಸಂಸ್ಕೃತಿಯನ್ನು ಪಾಟೀಲರು ತಮ್ಮ ವಿವೇಕದ ಮುಖಾಂತರ ಬಿಚ್ಚಿಡುತ್ತಿದ್ದಾರೆ.

ತೇಜಸ್ವಿ ಕಾದಂಬರಿಯಲ್ಲಿ ಇಂಗ್ಲೀಷ್ ಮಿಶ್ರಿತ ಕನ್ನಡ ಪದಗಳು ಒಟ್ಟಿಗೆ ಬಳಕೆಯಾಗುವುದನ್ನು ಕಾಣಬಹುದು.

'ಹುಟ್ಟಾ ನ್ಯಾಚುರಲಿಸ್ಟ್'' ಕರ್ವಾಲೊ ಕಾದಂಬರಿಯಲ್ಲಿ ಬರುವ ಈ ಪದವು ಮಂದಣ್ಣನನ್ನು ಕುರಿತಂತೆ ಕರ್ವಾಲೊರವರ ಅಭಿಪ್ರಾಯವಾಗಿದೆ. ಇಂಗ್ಲೀಷ್ ಪದವು ಕನ್ನಡದ ಜಾಯಮಾನಕ್ಕೆ ತಕ್ಕಂತೆ ಬಳಕೆಯಾಗುತ್ತಿರುವುದು ವಿಶೇಷವಾಗಿದೆ.

ತೇಜಸ್ವಿ ಕಾದಂಬರಿಗಳಲ್ಲಿ ಭಾಷೆಯು ಸಂಸ್ಕೃತಿಯನ್ನು ಬಿಂಬಿಸುತ್ತದೆ ಎಂಬುದು ಸತ್ಯ, ಕಾದಂಬರಿಗಳಲ್ಲಿ ಬಳಕೆಯಾಗಿರುವ ಭಾಷೆಯಲ್ಲಿನ ಪದ ವಾಕ್ಯಗಳ ಮೂಲಕ ನಾವು ಭಿನ್ನ ಸಂಸ್ಕೃತಿಯ ನೆಲೆಗಳನ್ನು ಅರ್ಥೈಸಿಕೊಳ್ಳಬಹುದಾಗಿದೆ. 'ಅವರು ನಾಲ್ವರು ಮೊದಲು ಇಂಗ್ಲೀಷ್ ಅಧ್ಯಾಪಕ ಜೀವಣ್ಣನ ಶಿಷ್ಯವೃತ್ತಿ ಮಾಡುತ್ತಾ ದಾರಿಯಲ್ಲಿ ಹೋಗಿಬರುವ ಕೆಸರೂರಿನ ಹುಡುಗಿಯರನ್ನೆಲ್ಲಾ ಪ್ರೀತಿಸಿ ಪ್ರೀತಿಸಿ ಸುಸ್ತಾಗಿ 'ಲಾಚಾರ್' ಆಗಿ ಹೋಗಿದ್ದರು. ಇಲ್ಲಿ ಬಳಕೆಯಾಗಿರುವ ಲಾಚಾರ್ ಎನ್ನುವ ಪದದ ಅರ್ಥವು ವಿಶಿಷ್ಟವಾದುದು. ಲಾಚಾರ್ ಎಂದರೆ ಬಲಹೀನ, ಸತ್ವಹೀನ ಎಂದು ಅರ್ಥವಿದೆ. ಇದೇ ರೀತಿಯ ಪದಗಳನ್ನು ಬಳಸಿದರೆ, ಭಾಷೆ ಒಂದು ರೀತಿಯಲ್ಲಿ ಓದುಗನನ್ನು ಮುಟ್ಟದೆ ಹೋಗಬಹುದು. ಆದ್ದರಿಂದ ಈ ರೀತಿಯ ಲಾಚಾರ್ ಪದದ ಬಳಕೆ ವಾಕ್ಯ ಸೃಷ್ಟಿ ತೇಜಸ್ವಿ ಕಾದಂಬರಿಗಳ ವಿಶೇಷತೆ.

ತೇಜಸ್ವಿಯವರ ಬರವಣಿಗೆಯ ಮೊದಲ ಘಟ್ಟದಲ್ಲಿ ರಚನೆಯಾದ ನಿಗೂಢ ಮನುಷ್ಯರು, ಸ್ವರೂಪ ಮತ್ತು ಹುಲಿಯೂರಿನ ಸರಹದ್ದು ಈ ಕೃತಿಗಳಲ್ಲಿನ ಸಂಕೇತಗಳ ಬಳಕೆ ವಿಶಿಷ್ಟವಾದದ್ದು.ಹುಲಿಯೂರಿನ ಸರಹದ್ದು ಕೃತಿಯಲ್ಲಿಇರುವೆ, ಹದ್ದು, ಕೋಳಿ ಇವುಗಳು ಸಂಕೇತವಾಗಿವೆ. ಸ್ವರೂಪ ಕಾದಂಬರಿಯಲ್ಲಿ ಬರುವ 'ಶಿಕಾರಿ'ಯ ವರ್ಣನೆಯು ಸಹ ರೂಪಕವಾಗಿ ಬಳಕೆಯಾಗಿದೆ. ಶಿಕಾರಿಯು ಸಾವು ಬದುಕಿನ ಹೋರಾಟವೆಂದು, ಅದ್ಧೊಂದು ವ್ಯಸನವೆಂದು ಶಿಕಾರಿಯನ್ನೇ ಬದುಕಿಗೆ ಹೋಲಿಸುವುದು ವಿಶಿಷ್ಟವಾಗಿದೆ. 'ಜುಗಾರಿಕ್ರಾಸ್' ಕಾದಂಬರಿಯ ಶೀರ್ಷಿಕೆಯೇ ಜಾಗತೀಕರಣದ ರೂಪಕವಾಗಿ ಬಳಸಿರುವುದು. ಈ ಜಗತ್ತೇ ಒಂದು ಜುಗಾರಿಕ್ರಾಸ್ ಎಂದು ಗ್ರಹಿಸಬಹುದಾಗಿದೆ. ಚಿದಂಬರ ರಹಸ್ಯ ಕಾದಂಬರಿಯಲ್ಲಿ ಬರುವ 'ಕೆಸರೂರು' ಮಾಯಾಲೋಕ ಕಾದಂಬರಿಯಲ್ಲಿ ಬರುವ 'ಗೊಂದಲಗೇರಿ' ಇವೆಲ್ಲಾ ಸಂಕೇತಗಳಾಗಿ ಬಳಕೆಯಾಗಿರುವುದು ತೇಜಸ್ವಿ ಕಥಾನಕದ ವಿಶೇಷ ಗುಣವಾಗಿದೆ. ರೋಗಗ್ರಸ್ತ ಭಾರತದ ಪರಿಸ್ಥಿತಿಯನ್ನು ಜುಗಾರಿಕ್ರಾಸ್, ಗೊಂದಲಗೇರಿ, ಕೆಸರೂರು ಇವುಗಳು ಪ್ರತಿನಿಧಿಸುತ್ತವೆ. ಇಂತಹ ಪ್ರತಿನಿಧೀಕರಣಕ್ಕೆ ತೇಜಸ್ವಿಯವರ ವಿಶಿಷ್ಟ ಭಾಷಾ ಶಕ್ತಿಯೇ ಕಾರಣ. ತಮ್ಮ ಭಾಷೆಯಲ್ಲಿ ಇಡೀ ವ್ಯವಸ್ಥೆಯನ್ನು ಹಿಡಿದಿರುವಂತಹ ಶಕ್ತ ಬರಹಗಾರರ ತೇಜಸ್ವಿಯಾಗಿದ್ದಾರೆ. ತೇಜಸ್ವಿಯವರ ಪ್ರಕಾರ ಬರೆಯೋದು ಅಂದರೆ ಸೃಷ್ಟಿಸೋದು ಎಂದರ್ಥ. ತೇಜಸ್ವಿಯವರ ಸೃಷ್ಟಿಯಲ್ಲಿ ನಾನಾ ವರ್ಗದ ನಾನಾ ಧರ್ಮದ ಜನ ಯಾವುದೇ ರೀತಿಯ ದ್ವೇಷಗಳಿಲ್ಲದೆ ಬದುಕು ಸಾಗಿಸುತ್ತಾರೆ. ಅದು ಅವರ ಬರವಣಿಗೆಯ ವಿಶೇಷತೆ.

''ಹಂಗಾರೆ ನಿಮ್ಮ ಸೌಕಾರ್‍ರು ಯಾವ ಜಾತಿನೋ?'' ಎಂದನಂತೆ

ಪ್ಯಾರ ''ಗೌಡ್ರು'' ಎಂದ
''ಲಿಂಗಾಯ್ತ ಗೌಡ್ರ''
''ಇಲ್ಲಪ್ಪಾ ಒಕ್ಕಲಿಗರು''
''ಹಂಗರೆ ಮಾಂಸ ತಿನ್ನಬೇಕಲ್ಲ''

''ಓ ಅದಾ ! ಅದು ತಿನ್ತಾರೇ!'' ಎಂದು ಪ್ಯಾರ ಹೇಳಿದನಂತೆ

''ಹಂಗಾರೆ ಪಿಗ್ಮಟನ್ ಸೊಲ್ಪ ನಾಳೆ ತಂದು ಕೊಡಲೇನೋ''?

ಎಂದು ಕೇಳಿದ್ದಕ್ಕೆ ಪ್ಯಾರ 'ಓ ಆಗಲಿ' ಎಂದನಂತೆ ಪ್ಯಾರ ನಡುದದನೆಲ್ಲಾ ಕಣ್ಣಿಗೆ ಕಟ್ಟುವಂತೆ ಹೇಳಿದ.

ಲೊ ಪ್ಯಾರ 'ಪಿಗ್ಮಟನ್ ಅಂದ್ರೇನು ಗೊತ್ತೇನೋ ? '' ಎಂದೆ.

''ಮಟನ್ ಅಂದ್ರೆ ಮಾವ್ಸ ಅಲ್ಲೇನ್ ಸ್ವಾಮಿ. ನಮ್ಮ ಭಾವ ಮೂಡುಗೆರೇಲಿ ಫೇನ್ಸಿ ಮಟನ್‌ಸ್ಟಾಲ್ ಇಟ್ಟಿದ್ದಾನೆ'' ಎಂದ.

''ಮಂದಣ್ಣ ಹಂದಿ ಮಾಂಸಕ್ಕೆ ಪಿಗ್ಮಟನ್ ಅಂದಿದ್ದಾನೆ ಕಣೋ''

ನಿನ್ಮನೆ ಹಾಳಾಗ. ಅವನ ಇಂಗ್ಲೀಷಿಗೆ ಬೆಂಕಿಹಾಕ. ಸಾಬನ ಬಾಯಿಗೆ ಹಂದಿಮಾಂಸ, ಹಾಕಿ ಜಾತಿ ಕೆಡಿಸಿದರಂತ, ಜಗಳ ತೆಗೆದೀಯ ಈಗ್ಲೇ ಹೇಳಿದ್ದೀನಿ.'' ಎಂದೆ (ಕರ್ವಾಲೊ. ಪುಟ-೨೨, ಲೇ. ಪೂರ್ಣಚಂದ್ರ ತೇಜಸ್ವಿ)

ಇಲ್ಲಿ ನಿರೂಪಕನು ಸ್ವತಃ ಕಾದಂಬರಿಯಲ್ಲಿ ಪಾತ್ರವಾಗಿ, ಕಾದಂಬರಿಯ ಪಾತ್ರಗಳ ಜೊತೆಗೆ ಸಂಭಾಷಣೆ ಮಾಡುತ್ತಿದ್ದಾರೆ. ನಿರೂಪಕನಾಗಿ ಬಳಸುವ ಭಾಷೆಗೂ ಕಾದಂಬರಿ ಪಾತ್ರವಾಗಿ, ಪಾತ್ರಗಳ ಜೊತೆಗೆ ಬಳಸುವ ಭಾಷೆಗೂ ಸಾಕಷ್ಟು ವ್ಯತ್ಯಾಸವಿರುವುದನ್ನು ಗಮನಿಸಬಹುದು.

ತೇಜಸ್ವಿ ಕಾದಂಬರಿಗಳಲ್ಲಿ ಮೇಲಿನ ಸಂಭಾಷಣೆಯಿಂದ ವೇದ್ಯವಾಗುವ ವಿಷಯವೆಂದರೆ ಎಂತಹ ಗಂಭೀರ ವಿಚಾರವನ್ನೇ ಆಗಲಿ ಹಾಸ್ಯದ ಧಾಟಿಯಲ್ಲಿ ನಿರೂಪಿಸಿದ್ದಾರೆ. ಧರ್ಮದಂತಹ ಕ್ಲಿಷ್ಟ ವಿಷಯಗಳನ್ನು ತಮ್ಮದೇ ನವಿರು ಧಾಟಿಯಲ್ಲಿ ನಿರೂಪಿಸಿದ್ದಾರೆ. ಭಾಷೆಯಲ್ಲಿ ಒಂದು ಸಂಸ್ಕೃತಿಯನ್ನು ಕಟ್ಟುವ ಗುಣ, ವರ್ಣಿಸುವ ಗುಣ ತೇಜಸ್ವಿ ಕಾದಂಬಂರಿಗಳ ವಿಶೇಷತೆಯಾಗಿದೆ.

ಮಾಯಾಲೋಕ ಕಾದಂಬರಿಯಲ್ಲಿ ಹಲವಾರು ಜನಾಂಗಗಳು ಸ್ಥಾನ ಪಡೆದಿವೆ. ಅದರಲ್ಲಿ ಭೋವಿ ಜನಾಂಗದವರು ಬಳಸುವ ಭಾಷೆಯ ವಿಶೇಷತೆಯನ್ನು ನೋಡೋಣ.

''ತಿಮ್ಮಾ ಬೋವಿ ಬಂದವನು ಕುರ್ಚಿ ಮೇಲೆ ಕುಳಿತುಕೊಂಡು ಶೇವಿಂಗ್ ಮಾಡಿಸ್ಕೊಳ್ಳುತ್ತಿದ್ದ ಸಿದ್ದೇಗೌಡನನ್ನು ನೋಡಿ 'ನಮಸ್ಕಾರ ಸೋಮೇ ! ಏನಾರು ಮಣ್ಣು ಕೆಲಸ ಈತ? ಎಂದು ಕೇಳಿದ ಸಿದ್ದೇಗೌಡ ಉತ್ತರಿಸುವುದಕ್ಕೆ ಮೊದಲೇ ಅಣ್ಣಪಣ್ಣ ''ಅಲ್ಲೋ ತಿಮ್ಮಾ ಬೋಯಿ! ನಿನ್ನೇ ಟೆಲಿಫೋನು ಡಿಪಾರ್ಟ್‌ಮೆಂಟಿನೋರ ಕೆಲಸ ಕಂತ್ರಾಟು ಹಿಡ್ದು ಓಣೀ ತೆಗೀತಾ ಇದ್ರಿ ! ಈಗ ಕೆಲಸ ಕೇಳಿದಿಯಲ್ಲಾ ! ಆ ಕೆಲಸ ಆಗಲೇ ಮುಗಿದುಹೋಯ್ತ!'' ಎಂದು ಕೇಳಿದ.

''ಕೆಲಸಕ್ಕೇನು ಬೇಕಾದಂಗಿದೆ. ಅಲ್ಲಿ ಆ ಕೆಲಸಾನೂ ಬ್ಯಾಡ, ಆ ಭಂಗಾನೂ ಬ್ಯಾಡ, ಅಂತ ಓಣಿ ಹೊಡೆದಿದ್ದಷ್ಟು ಮುಚ್ಚಿ ಕೊಟ್ಟು ಕೆಲಸ ನಿಲ್ಲಿಸಿಬಿಟ್ವು ಸ್ವಾಮಿ ಅದ್ರಾಗೆ ನಮಗೆ ಸಿಕ್ಕೋದೇ ಮೂರ‍್ಕಾಸು ಅದ್ರಾಗೂ ಮೇಲಿಂದ ಕೆಳಗಿನವರೆಗೆ ಪಾಲು ಕೇಳ್ತಾರೆ! ಕೊಡದೆ ಇದ್ದರೆ ಕೆಲಸ ನೋಡಿ ಬಿಲ್ಲುಪಾಸ್ ಮಾಡ್ತೀವಿ ಅಂತ ಬಂದು ಇಲ್ಲಿ ಆಳ ಇಲ್ಲ, ಇಲ್ಲಿ ಅಗಲ ಕಮ್ಮಿ ಮಾಡಿದೀಯ ಅಂತ ತಕ್ರಾರು ತೆಗೆದು ದುಡ್ಡು ಕೊಡೋದು ತಡಾ ಮಾಡ್ತಾರೆ! ಈ ಬಿಸ್ಲಾಗೆ ಮಗು ಸೊಂಟದ ಮೇಲೆ ಇಟ್ಕೊಂಡು ನಾವು ಎಷ್ಟಂತ ಇವರ ಹಿಂದೆ ತಿರುಗೋಕಾಗ್ತದೆ ಹೇಳಿ ಸ್ವಾಮಿ. ಅದ್ಕೇ ನಾವು ಈ ಗೋಳೆ ಬ್ಯಾಡ ಅಂತ ಕೆಲಸ ಕೈದು ಮಾಡಿಬಿಟ್ವು. (ಮಾಯಾಲೋಕ-೧, ಪುಟ-೨೨-೨೩, ಲೇ. ಪೂರ್ಣಚಂದ್ರತೇಜಸ್ವಿ).

ತಿಮ್ಮಾ ಬೋವಿಯು ತನ್ನದೇ ಆದ ಭಾಷೆಯ ಮುಖಾಂತರ ತನ್ನ ನೋವುಗಳನ್ನು ನಿವೇದಿಸಿಕೊಳ್ಳುತ್ತಾನೆ. ಈತನ ಮಾತುಗಳಲ್ಲಿ ವ್ಯವಸ್ಥೆಯು ಹೇಗೆ ಭ್ರಷ್ಟಾಚಾರದ, ಲಂಚಗುಳಿತನದ ಕೂಪವಾಗಿದೆ ಎಂಬುವುದನ್ನು ತನ್ನ ಅನುಭವಲೋಕದ ಮುಖಾಂತರ ತಿಮ್ಮಾ ಬೋವಿ ಕಟ್ಟಿಕೊಡುತ್ತಾನೆ. ಯಾವುದೇ ಒಬ್ಬ ವ್ಯಕ್ತಿ ತನ್ನ ನೋವುಗಳನ್ನು ತನ್ನದೇ ಆದ ಮಾತುಗಳ ಮುಖಾಂತರ ಕಟ್ಟಿಕೊಟ್ಟರೆ ಅದು ಸಹೃದಯನ ಅಂತಃಕರಣವನ್ನು ಮುಟ್ಟುತ್ತದೆ. ಆದರೆ ಆತನ ನೋವುಗಳನ್ನು ಕಂಡಂತಹ ಬೇರೊಬ್ಬ ವ್ಯಕ್ತಿ ತನ್ನ ಮಾತುಗಳ ಮುಖಾಂತರ ಕಟ್ಟಿಕೊಟ್ಟರೆ ಅದು ಓದುಗರನ್ನು ಮುಟ್ಟದೆ ಇರಬಹುದು. ಅಥವಾ ನೋವಿನ ತೀವ್ರತೆಯ ಅನುಭವ ಓದುಗನಿಗೆ ಆಗದೆ ಇರಬಹುದು. ತಿಮ್ಮಾ ಬೋವಿ ತನ್ನ ನೋವುಗಳನ್ನು ವ್ಯವಸ್ಥೆಯ ದೋಷಗಳನ್ನು ಹೊಟ್ಟೆಪಾಡಿಗಾಗಿ ತಾನು ಅನುಭವಿಸುತ್ತಿರುವ ಕಷ್ಟಗಳನ್ನು ಒಳಗಿನ ತೀವ್ರತೆಯಿಂದ ತನ್ನ ಭಾಷೆಯಲ್ಲಿಯೇ ಕಟ್ಟಿಕೊಡುತ್ತಾನೆ.

ತೇಜಸ್ವಿ ಕಾದಂಬರಿಯ ನಿರೂಪಕನ ಭಾಷೆಯು ನಿರೂಪಣೆಯನ್ನು ಮಾಡುತ್ತಿರುವಾಗ ಶಿಷ್ಟವಾಗಿ ಕಂಡುಬರುತ್ತದೆ.

'ಹಕ್ಕಿ ಪಿಕ್ಕಿಯವರ ಒಂದು ಗುಂಪು ಬಂದು ಸಾಮಿಲ್ಲಿನ ಎದುರು ಮೈದಾನದಲ್ಲಿ ಬೀಡು ಬಿಟ್ಟಿದ್ದರು. ಇವರು ನನ್ನ ತೋಟದ ಬೇಲಿಯುದ್ದಕ್ಕೂ ಪ್ರಾಣಿಗಳುಓಡಾಡುವ ಗಂಡಿಗಳಲೆಲ್ಲಾ ಉರುಳು ಕಟ್ಟಿ, ಅಲ್ಲಿ ಓಡಾಡುತ್ತಿದ್ದ ಕಾಡುಕೋಳಿ, ಚಿಟ್ಟುಕೋಳಿ, ಉಡು, ಇತ್ಯಾದಿಗಳನ್ನು ಹಿಡಿಯುತ್ತಿದ್ದರು. ನನ್ನ ತೋಟದೊಳಗೆ ಯಾರಿಗೂ ಶಿಕಾರಿ ಮಾಡಲು ಬಿಡದೆ ಅವುಗಳನ್ನು ಉಳಿಸಿದ್ದೆ. ಹಾಗಾಗಿ ಪ್ರತಿವರ್ಷ ಅಲ್ಲಿಗೆ ವಲಸೆ ಬರುವ ಹಕ್ಕಿಪಿಕ್ಕಿಯವರಿಗೂ ನನಗೂ ಯಾವಾಗಲೂ ಘರ್ಷಣೆ, ಚಕಮಕಿ ಇದ್ದಿದ್ದೆ. (ಮಾಯಾಲೋಕ-೧, ಪುಟ-೨, ಲೇ. ಪೂರ್ಣಚಂದ್ರ ತೇಜಸ್ವಿ).

ಕಾದಂಬರಿಯಲ್ಲಿ ನಿರೂಪಕನು ನಿರೂಪಣಾ ದಾಟಿಯಲ್ಲಿ ಕಾದಂಬರಿಯ ಕಥಾನಕವನ್ನು ವಿವರಿಸುವ ಭಾಷೆಯು ವಿಶಿಷ್ಟವಾಗಿದೆ. ನಿರುದ್ವಿಗ್ನವಾಗಿ ಭಾಷಾ ಶೈಲಿಯು ಸಾಗುತ್ತದೆ. ಯಾವುದೇ ಇಂಗ್ಲೀಷ್ ಪದಗಳ ಬಳಕೆಯಿಲ್ಲದೆ ಪ್ರತಿಮೆ, ಸಂಕೇತಗಳನ್ನು ಬಳಸದೆ ಚಿತ್ರಣವನ್ನು ಕಟ್ಟಿಕೊಡುವಂತಹ ಕನ್ನಡಿ ಗುಣ ನಿರೂಪಕನ ಭಾಷೆಯಲ್ಲಿ ಕಂಡುಬರುತ್ತದೆ. ತೇಜಸ್ವಿಯವರ ಮೊದಲ ಘಟ್ಟದ ಕಾದಂಬರಿಯಲ್ಲಿ ಭಾಷೆಯ ಬಿಗಿಹಿಡಿತ ಅಳೆದು ತೂಗಿ ಭಾಷೆಯನ್ನು ಬಳಸುವ ಕ್ರಮ ಇಲ್ಲಿ ಬದಲಾಗಿದೆ.

'ಅಲ್ರೋ ಬಡ್ಡೀಮಕ್ಕಳಾ! ಇದೇನ್ರೋ ಮೈ ಕೈ ಎಲ್ಲಾ ರಕ್ತ ಮಾಡಿಕೊಂಡು ನಿಂತಿದೀರಲ್ಲಾ? ಯಾರ್ನಾರೂ ಖೂನಿಗೀನಿ ಮಾಡಿದ್ರೇನೋ ! ಹಂಗೇನಾದ್ರೂ ಇದ್ರೆ ಹೇಳ್ಬಿಡಿ. ನಾನು ಮೊದಲು ಇಲ್ಲಿಂದ ಆದಷ್ಟು ಬೇಗ ಜಾಗ ಖಾಲಿ ಮಾಡ್ತೀನಿ. ನಿಮ್ಮ ಜೊತೆ ಸೇರಿ ಖೂನಿಕೇಸಲ್ಲಿ ಸಿಕ್ಕಾಕಿಕೊಂಡು ಕೋರ್ಟು ತಿರುಗೋದಕ್ಕೆ ನನ್ನ ಕೈಲಂತೂ ಆಗೋದಿಲ್ಲ.'' (ಮಾಯಾಲೋಕ-೧, ಪುಟ-೮೧, ಲೇ. ಪೂರ್ಣಚಂದ್ರ ತೇಜಸ್ವಿ)

ನಿರೂಪಕನ ಭಾಷೆಯು ಕಾದಂಬರಿಯಲ್ಲಿ ತುಸು ಶಿಷ್ಟವಾಗಿ ಮೂಡಿ ಬಂದಿದೆ. ನಿರೂಪಕನೇ ಕಾದಂಬರಿಯಲ್ಲಿ ಒಂದು ಪಾತ್ರವಾಗಿ ಬೇರೆ ಪಾತ್ರಗಳ ಜೊತೆಗೆ ಸಂಭಾಷಣೆ ನಡೆಸುವಾಗ, ಆ ಪಾತ್ರಗಳ ಭಾಷೆಯಂತೆ ಗ್ರಾಮೀಣ ಸೊಗಡನ್ನು ಉಳಿಸಿಕೊಂಡು ಸಂಭಾಷಣೆ ಮಾಡುತ್ತಾರೆ ಮತ್ತು ಬಯ್ಗುಳವನ್ನು ಸಹ ಬಳಸಿದ್ದಾರೆ. ಬಯ್ಗುಳಗಳು ಕೇವಲ ಪಾತ್ರಗಳ ಭಾಷೆಯಲ್ಲಿ ಕಂಡು ಬರದೆ ನಿರೂಪಕನ ಭಾಷೆಯಲ್ಲೂ ಸಹ ಕಂಡು ಬರುತ್ತವೆ.

ತೇಜಸ್ವಿ ಕಾದಂಬರಿಗಳ ಭಾಷೆ ಯಾವುದನ್ನೂ ಸಹ ದೂರದಿಂದ ನಿಂತು ನೋಡಿ ವಿವರಿಸುವುದಿಲ್ಲ. ಅನುಭವಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ವಿವರಿಸುವುದು ತೇಜಸ್ವಿ ಭಾಷೆಯ ವಿಶೇಷವಾದ ಗುಣ.

''ಬನ್ನೀ ಸಾರ್! ಖೂನಿ ಮಾಡಿದೋರೆಲ್ಲಾ ರಾಜರೋಷವಾಗಿ ಮೀಸೆ ತಿರುವಿಕೊಂಡು ಓಡಾಡ್ತ ಇರಬೇಕಾದರೆ ನೀವು ನಮ್ಮ ಮೈಕೈ ರಕ್ತ ನೋಡಿದಕ್ಕೆ ಇಷ್ಟು ಹೆದರಿದರೆ ಹ್ಯಾಗೆ?''ಎಂದ ಜಗ್ಗಣ್ಣ (ಮಾಯಾಲೋಕ-೧, ಪುಟ-೮೧, ಲೇ. ಪೂರ್ಣಚಂದ್ರ ತೇಜಸ್ವಿ) ನಿರೂಪಕನ ಪ್ರಶ್ನೆಗೆ ಉತ್ತರ ರೂಪದಲ್ಲಿ ವ್ಯಕ್ತವಾಗಿರುವ ಪಾತ್ರದ ಭಾಷೆಯು ಗ್ರಾಮೀಣ ಸೊಗಡಿನಿಂದ ಕೂಡಿದೆ. ತೇಜಸ್ವಿ ಕಾದಂಬರಿಗಳಲ್ಲಿ ಆಡುಮಾತೇ

ಬರಹವಾಗಿ ರೂಪುಗೊಂಡಿರುವುದು ಒಂದು ವಿಶೇಷತೆ. ಪಾತ್ರಗಳು ಬಳಸುವ ಭಾಷೆಯನ್ನು ಯಥಾವತ್ ಆಗಿ ಕಾದಂಬರಿಯಲ್ಲಿ ಬಳಸಿಕೊಂಡಿರುವುದು ಪಾತ್ರಗಳ ಅನುಭವ ಲೋಕಕ್ಕೆ ಯಾವುದೇ ಧಕ್ಕೆಯಾಗಿಲ್ಲ.

ಪಾತ್ರಗಳ ಆಡುನುಡಿಯಲ್ಲೇ ಸಂಸ್ಕೃತಿಯನ್ನು ಕಟ್ಟಿಕೊಡಲು ಯಶಸ್ವಿಯಾಗಿರುವುದು ಮಾತ್ರವಲ್ಲದೆ, ಪಾತ್ರಗಳ ಉಚ್ಚಾರಣೆಯನ್ನು ಯಥಾವತ್ತಾಗಿ ದಾಖಲಿಸಲಾಗಿದೆ. ಭಾಷೆಯ ಪದಗಳು ಪಾತ್ರಗಳು ಉಚ್ಚರಿಸುವ ರೀತಿಯಲ್ಲೇ ಕಾದಂಬರಿಯಲ್ಲಿ ಬಳಕೆಯಾಗಿವೆ.

''ತರಕಾರಿ ಅಂಗಡಿಯ ಜಲೀಲ್ ಸಾಬು ತನ್ನ ತರ್ಕಾರಿಗಳ ತಾಜಾತನ ಉಳಿಸಲು ನೀರು ಚಿಮುಕಿಸುತ್ತಾ ಇದ್ದ. ಎಷ್ಟು ನೀರು ಚಿಮುಕಿಸಿದರೂ ಆ ಗತಕಾಲದ ಪಳಯುಳಿಕೆಯಂತಹ ತರಕಾರಿಗಳನ್ನು ಸಜೀವಗೊಳಿಸುವುದು ಕಷ್ಟ ಸಾಧ್ಯವಿತ್ತು. ಒಣಗಿ ಬೆಂಡಾಗಿ ನರಿಯ ಬಾಲದಂತೆ ಡೊಂಕು ಬಿದ್ದಿದ್ದ ಮೂಲಂಗಿ, ಕ್ಯಾರೆಟ್, ಸುಕ್ಕುಬಿದ್ದ ಮುದುಕರ ಕೆನ್ನೆಯಂತೆ ಕಾಣುತ್ತಿದ್ದ ಟೊಮಾಟೋ, ನೋಲ್ ಕೋಲುಗಳು, ರಬ್ಬರ್ ಬ್ಯಾಂಡುಗಳಂತೆ ಹಿಗ್ಗಿ ಕುಗ್ಗುವ ಸ್ಥಿತಿಸ್ಥಾಪಕ ಶಕ್ತಿ ಬಂದಿದ್ದ ಬೀನ್ಸು! ಇವುಗಳಿಗೆಲ್ಲಾ ಹೇಗೆ ಗಿರಾಕಿ ಹೊಂದಿಸಿ ಖಾಲಿ ಮಾಡುವುದೋ ಎಂದು ಚಿಂತಾಕ್ರಾಂತನಾಗಿದ್ದ ಜಲೀಲ್. ಸ್ವಲ್ಪ ಚೆನ್ನಾಗಿರುವವನ್ನಾದರೂ ಮೇಲೆತ್ತಿ ಕಣ್ಣಿಗೆ ಕಾಣುವಂತೆ ಇಡೋಣ ಎಂದು ತರಕಾರಿ ರಾಶಿಯನ್ನು ಜಲೀಲ್ ಅಗೆದಗೆದು ತೆಗೆದ ಹಾಗೂ ಬತ್ತಿದ ತೊಗಲಿನ ಸುಕ್ಕಿದ ಮೋರೆಯ ಕುಗ್ಗಿದ ತರಕಾರಿಗಳೇ, ಈಜಿಪ್ಟಿನ ಮಮ್ಮಿಗಳಂತೆ ಹೊರಬಿದ್ದು ಜಲೀಲ್‌ನ ಹತಾಶೆ ಮಿಗಿಲಾಗುತ್ತಾ ಹೋಯ್ತು. ಸ್ಕೂಲಿಗೆ ರಜ ಇದ್ದರಿಂದ ಈಗಿನಿಂದಲೇ ಅಂಗಡಿ ವ್ಯಾಪಾರ ಕಲಿತುಕೊಳ್ಳಲಿಯೆಂದು ಮಗ ಹಮೀದನನ್ನು ಕರೆದುಕೊಂಡು ಬಂದಿದ್ದ. ಚಿಕ್ಕವನಾದ ಹಮೀದನಿಗೆ ಮಾತ್ರ ಪರಿಸ್ಥಿತಿ ನಿರಾಶಾದಾಯಕವಾಗಿ ಕಂಡಿರಲಿಲ್ಲ. ಅವನು ಪೂರ್ತಿ ಹುಮ್ಮಸ್ಸಿನಲ್ಲಿ ದೂರದ ಬೋರ್‌ವೆಲ್ಲಿನಿಂದ ನೀರನ್ನು ತುಂಬಿ ತುಂಬಿ ಅಪ್ಪನಿಗೆ ಸಪ್ಲೇ ಕೊಡುತ್ತಾ ಉತ್ಸಾಹದಲ್ಲಿ ಓಡಾಡುತ್ತಿದ್ದ, ತರಕಾರಿ ಕೊಳ್ಳಲು ಬಂದವರಿಗೆ 'ತಾಜಾ ತರಕಾರಿ ಬಿಸಿಲಿಗೆ ಸ್ವಲ್ಪ ಬಾಡಿದೆ ಅಷ್ಟೇ' ಎಂದು ಹೇಳುತ್ತಾ ತನ್ನ ಮಾತನ್ನು ಆ ಬತ್ತಿದ ತರಕಾರಿಯನ್ನೇ ತೆಗೆದುಕೊಂಡು ಬೆರಳು ಸಂದಿ ಒತ್ತಿ ಮುರಿದು ತೋರಿಸುತ್ತಾ'' ಏನಾದ್ರು ಮಿಷ್ಟೀಕ್ ಬಂದ್ರೆ ವಾಪಸ್ಸು ಮಾಡಿಬಿಡಿ '' ಎಂದು ಧೈರ್ಯ ತುಂಬುತ್ತಿದ್ದ (ಮಾಯಾಲೋಕ-೧, ಪುಟ-೨೭, ಲೇ.ಪೂರ್ಣಚಂದ್ರತೇಜಸ್ವಿ)

ಮೇಲಿನ ಪರಿಚ್ಛೇದಲ್ಲಿರುವ ವಿಷಯವು ಸಾಮಾಜಿಕ, ಸಾಂಸ್ಕೃತಿಕ, ಭಾಷಿಕ, ಬೌದ್ಧಿಕ ಹಲವು ಆಯಾಮಗಳಿಂದ ಮುಖ್ಯವೆನಿಸುತ್ತದೆ.

ನಿರೂಪಕನು ತಾನು ಕಂಡ ತರಕಾರಿ ಅಂಗಡಿಯ ಪರಿಸ್ಥಿತಿಯನ್ನು ವರ್ಣಿಸುತ್ತಾ ವಿಶ್ವಸ್ಥ ಮಾದರಿಯನ್ನು ತಮ್ಮ ಮುಂದೆ ತೆರೆದಿಡುತ್ತಾರೆ. ಬಾಡಿದ ತರಕಾರಿಯನ್ನು ಹೋಲಿಸಲು ತೆಗೆದುಕೊಂಡಿರುವ ಉದಾಹರಣೆಗಳು ದೇಸಿಯವಾಗಿದ್ದು ಓದುಗರಿಗೆ ತಲುಪುವಂತಿವೆ.

ಒಣಗಿದ್ದ ಮೂಲಂಗಿಯನ್ನು ನರಿಯ ಬಾಲಕ್ಕೆ ಹೋಲಿಸುವುದು ಟೊಮೋಟೋವನ್ನು ಸುಕ್ಕು ಬಿದ್ದ ಮುದುಕರ ಕೆನ್ನೆಗೆ ಹೋಲಿಸುವುದು, ನೋಲ್‌ಕೋಲುಗಳನ್ನು , ರಬ್ಬರ್ ಬ್ಯಾಂಡುಗಳಿಗೆ ಹೋಲಿಸುವುದು ತರಕಾರಿಗಳನ್ನು ಗತಕಾಲದ ಪಳೆಯುಳಿಕೆಗಳಿಗೆ ಹೋಲಿಸುವುದು ಈ ಹೋಲಿಕೆಗಳೆಲ್ಲಾ ವಿಡಂಬನಾತ್ಮಕವಾಗಿ ಕಂಡುಬಂದಿದೆ' ತೇಜಸ್ವಿ ಕಾದಂಬರಿಗಳ ಭಾಷೆಯ ಮತ್ತೊಂದು ವಿಶೇಷತೆ ಈ ವಿಡಂಬನೆ, ಕೃಷಿ ಪದ್ಧತಿಯಲ್ಲಿ ರಾಸಾಯನಿಕ ಗೊಬ್ಬರಗಳನ್ನು ಬಳಸಿ ಬೆಳೆದ ತರಕಾರಿಗಳು ಹೇಗೆ ತಮ ಕಾಂತಿಯನ್ನು ಕಳೆದುಕೊಳ್ಳುತ್ತವೆ ಎಂಬ ಅಂಶ ಈ ವಿಡಂಬನೆಯ ಹಿಂದಿದೆ. ಜಾಗತೀಕರಣ, ಆಧುನೀಕರಣದ ಫಲವಾಗಿ ರಾಸಾಯನಿಕ ಗೊಬ್ಬರಗಳು ಭಾರತಕ್ಕೆ ಬಂದವು. ಅದನ್ನು ವಿರೋಧಿಸುವ ಧ್ವನಿ, ತೇಜಸ್ವಿ ಸಾಹಿತ್ಯದಲ್ಲಿ ವ್ಯಕ್ತವಾಗಿದೆ. ಜೀವನೋಪಾಯಕ್ಕಾಗಿ ಜನರು ಮಾಡುವ ನಾನಾ ತಂತ್ರಗಳನ್ನು ತೇಜಸ್ವಿಯವರ ಮಾಯಾಲೋಕ ತೆರೆದಿಡುತ್ತವೆ. ಆದ್ದರಿಂದಲೇ ತೇಜಸ್ವಿಯವರಿಗೆ ಈ ಲೋಕ ವಿಭಿನ್ನವಾಗಿ ಕಂಡು ಅವರು ಅದನ್ನು ಮಾಯಾಲೋಕ ಎಂದು ಕರೆದಿರಬಹುದೇ ? ಎಂಬ ಪ್ರಶ್ನೆ ಉದ್ಭವವಾಗುತ್ತದೆ.

ಜಲೀಲನ ಮಗನಾದ ಹಮೀದನು 'ಮುಸ್ಲಿಂ ಸಮುದಾಯದಿಂದ ಬಂದವನು ಅವನು ಮಿಸ್ಟೇಕ್ ಎಂಬ ಪದವನ್ನು 'ಮಿಸ್ಟಿಕ್' ಎಂದು ಬಳಸುತ್ತಿರುವುದು ಮುಸ್ಲಿಂ ಸಮುದಾಯದಲ್ಲಿ ವಿಶಿಷ್ಟವಾಗಿ ಬಳಕೆಯಲ್ಲಿರುವುದೇ ಅಥವಾ ಗ್ರಾಮ್ಯದ ಸೊಗಡಿನಿಂದ ಆ ಪದವು ರೂಪಾಂತರಗೊಂಡಿರಬಹುದೇ ಎಂಬುವುದು ಮುಖ್ಯವಾದದ್ದು.

ತೇಜಸ್ವಿ ಕಾದಂಬರಿಯಲ್ಲಿ ಬಳಕೆಯಾಗುವ ಭಾಷೆಯು ತೇಜಸ್ವಿಯವರು ಸಾಹಿತ್ಯದಲ್ಲಿ ವಿಭಿನ್ನತೆಯನ್ನು ತರಲಾಗಲೀ, ಓದುಗರನ್ನು ಸಂತೋಷಪಡಿಸುವ

ಸಲುವಾಗಲೀ ಅಲ್ಲ ಮತ್ತು ಭಾಷೆಯನ್ನು ಕುರಿತಾದಂತೆ ಭಾಷಾ ಮೀಮಾಂಸೆ ಸೃಷ್ಟಿ ಮಾಡುವ ಸಲುವಾಗಿಯೂ ಅಲ್ಲ. ಆದರ್ಶಕ್ಕಾಗಿ ಆಗಲೀ, ವಿಭಿನ್ನವಾಗಿ ಕಾಣಿಸಿಕೊಳ್ಳುವುದಕ್ಕಾಗಲೀ ಅಲ್ಲ. ಅಂಚಿನ ಪಾತ್ರಗಳ ಬದುಕನ್ನು ಕಟ್ಟಿಕೊಡುವ ಮಾನವೀಯತೆಯನ್ನು ಸಾದರಪಡಿಸುವ ಸಲುವಾಗಿ, ವಿಶಿಷ್ಟ ಭಾಷೆಯನ್ನು ಬಳಸಿದ್ದಾರೆ. ಸ್ವಾರಸ್ಯವೆಂದರೆ ತೇಜಸ್ವಿಯವರು ಬಳಸುವ ಭಾಷೆಯಿಂದಲೇ ಅವರ ಸಾಹಿತ್ಯವನ್ನು ಮೆಚ್ಚುವ ಓದುಗರಿರುವುದು ಅವರ 'ಭಾಷಾ' ವಿಶಿಷ್ಟತೆಗೆ ಹಿಡಿದ ಕನ್ನಡಿಯಾಗಿದೆ.

'ಮತ್ತೆ ಗಾಳಿ ಭರ್ರನೆ ಬೀಸಿತು. ಕಿಟ್ಟಿಯ ಸಡಿಲಗೊಂಡಿದ್ದ ಎಡಗೈಯಿಂದ ಜಾರಿ ಬಾಗಿಲು ದಿಢೀರನೆ ತೆರೆದು ಕೊಂಡಿತ್ತು.'

'ಲೋ, ಎಂಥದೋ ಅದು ಶಬ್ದಾ' ಎಂದು ತಾಯಿ ಚಿನ್ನಮ್ಮನವರು ಒಳಗಿನಿಂದ ಕೂಗಿದರು. ಕಿಟ್ಟಿ ಬೆಚ್ಚಿ ಬಾಗಿಲನ್ನು ಮುಚ್ಚಿ ಎರಡು ತಾಳಗಳನ್ನು ಗಟ್ಟಿಯಾಗಿ ಹಾಕಿದ. ಬಾಗಿಲು ಶಬ್ಧಕ್ಕೆ ಕಿಟ್ಟಿಯ ಎರಡನೇ ತಮ್ಮನಾದ ಸದಾನಂದ ತೊಟ್ಟಿಲಲ್ಲೇ ಅಳತೊಡಗಿದುದು ಚಿನ್ನಮ್ಮನ ಸೂಕ್ಷ್ಮ ಕಿವಿಗೆ ಕೇಳಿಸಿಯೇ ಬಿಟ್ಟಿತು. ಅವರು ಅಲ್ಲಿಂದಲ್ಲೇ 'ಕಿಟ್ಟಿ ಸ್ವಲ್ಪ ತೊಟ್ಲು ತೂಗಿ ಮಗೂನ ಮಲಗಿಸೋ' ಎಂದು ಕೂಗಿದರು. ಕಿಟ್ಟಿ ''ಓದೋದಕ್ಕಿಂತ ತೂಗೋದೇ ಎಷ್ಟೋ ವಾಸಿ'' ಎಂದುಕೊಂಡು ತೊಟ್ಟಿಲು ತೂಗಲು ಮಲಗುವ ಮನೆಕಡೆ ಹೋದ. '(ಲಿಂಗ ಬಂದ, ಪುಟ-೨. ಲೇ. ಪೂರ್ಣಚಂದ್ರ ತೇಜಸ್ವಿ)

ತೇಜಸ್ವಿಯವರ ಮೊದಲ ಕಥೆಯಾದ ಲಿಂಗ ಬಂದ ಕಥೆಯು ಭಾಷಿಕವಾಗಿ ನಮಗೆ ಮುಖ್ಯವೆನಿಸುತ್ತದೆ. ಭಾಷಿಕವಾಗಿ ಎಷ್ಟು ಬಿಗಿ ಬಂಧದಲ್ಲಿ ಹುದುಗಿದೆ ಎಂದರೆ ಯಾವ ಶಬ್ಧವನ್ನು ವ್ಯರ್ಥಗೊಳಿಸದಂತೆ ಬಳಸಬೇಕೆಂಬ ಎಚ್ಚರ, ಅನುಭವದ ಜೊತೆ ಭಾಷೆ ಬಿರುಕಿರದೆ ಏಕೀಭವಿಸುವ ಕಲಾಕೃತಿ ಕಟ್ಟಬೇಕು ಎಂಬ ಪ್ರಜ್ಞೆ ಅಲ್ಲಿ ಅತ್ಯುಗ್ರವಾಗಿ ಕೆಲಸಮಾಡಿದೆ ಎಂಬ ರಹಮತ್ ತರೀಕೆರೆರವರ ನಿಲುವು ಸಮರ್ಥವಾಗಿದೆ.

ಯಾವುದೇ ಲೇಖಕನ ಮೊದಲ ಘಟ್ಟದ ಸಾಹಿತ್ಯ ರಚನೆಯು ಭಾಷೆಯನ್ನು ಎಚ್ಚರವಾಗಿ ಬಳಸುವ ಕಡೆಗೆ ಇರುತ್ತದೆ ಎಂದರೆ ತಪ್ಪಾಗಲಾರದು. ಭಾಷೆ ಎನ್ನುವುದು ಅನುಭವಗಳನ್ನು ಯಾವುದೇ ಚೌಕಾಸಿ ಮಾಡದೆ ಪರಿಪೂರ್ಣವಾಗಿ ಕಟ್ಟಿಕೊಟ್ಟಾಗ ಆ ಕಲಾಕೃತಿ ಯಶಸ್ವಿಯಾಗುತ್ತದೆ. ತೇಜಸ್ವಿಯವರ ಎರಡನೇ ಘಟ್ಟದ ಸಾಹಿತ್ಯ ರಚನೆಯಲ್ಲಿ 'ಹೊಸ ದಿಗಂತದೆಡೆಗೆ ಸಾಗುವ ಹಂಬಲದಲ್ಲಿ ಭಾಷಿಕವಾಗಿಯೂ ಬದಲಾವಣೆಯಾದದ್ದು ವಿಶೇಷ.

ಮೊದಲ ಘಟ್ಟದ ಸಾಹಿತ್ಯದಲ್ಲಿ ಲಿಂಗ ಬಂದ ಸ್ವರೂಪ ಈ ಕೃತಿಗಳಲ್ಲಿ ನಿರೂಪಣೆಗೆ ಹೆಚ್ಚಿನ ಮಹತ್ವ ಕೊಡಲಾಗುತ್ತಿತ್ತು. ಎರಡನೇ ಘಟ್ಟದ ಬರವಣಿಗೆಯಲ್ಲಿ ಭಾಷೆಯು ಎಡರಿಲ್ಲದೆ ನಿರರ್ಗಳವಾಗಿ ಸಾಗಿದೆ.

ಎರಡನೆಯ ಘಟ್ಟದ ಬರವಣಿಗೆಯಲ್ಲಿ ವಿಶೇಷತೆ ಇದ್ದು, ಅಬಚೂರಿನ ಪೋಸ್ಟಾಫೀಸು ಕಥಾಸಂಕಲನದಲ್ಲಿ ಭಾಷೆಯಲ್ಲಿಯೇ ವಿಶಿಷ್ಟವಾದ ಪ್ರಯೋಗವನ್ನು ಮಾಡಿದ್ದಾರೆ. ಇಲ್ಲಿ ಭಾಷೆಯು ಬಿಗಿ ಬಂಧದಿಂದ ಸಡಿಲಗೊಂಡು ಸರಾಗವಾಗಿ ಮೂಡಿ ಬಂದಿದೆ.

'ಸೂರಾಚಾರಿ ಈರೇಗೌಡ ಇಬ್ಬರೂ ಇಸ್ಲಾಪುರದಿಂದ ಆ ದಿನ ಹೊರಟಾಗ ಒಂದೇ ಸಮನೆ ಮಳೆ ಸುರಿಯುತ್ತಿತ್ತು. ಇಬ್ಬರೂ ಮಾತನಾಡುತ್ತಾ ಇತ್ತಾವರದ ಅಭಿಮುಖವಾಗಿ ಹೊರಟರು. ದಾರಿ ಸಾಗಲೆಂದು ಯಾವ ರಭಸ ಕುತೂಹಲಗಳಲ್ಲಿದ ಏರಿಳಿತಗಳಿಲ್ಲದ ಧ್ವನಿಯಲ್ಲಿ 'ಕೊಯಪಯ ಕೊಯಪಯ' ಮಾತನಾಡುತ್ತಾ ಕಾಲು ಹಾಕತೊಡಗಿದರು. ಇತ್ತಾವರದ ಸುಬ್ಬಯ್ಯನ ಮನೆಯಲ್ಲಿ ಎತ್ತೊಂದನ್ನು ಖರೀದಿ ಮಾಡಲು ಅವರು ಹೊರಟಿದ್ದು, ಆವನ ಮನೆಯಲ್ಲಿ ಎತ್ತೊಂದು ಮಾರಾಟಕ್ಕಿದೆ. ಅಂತ ಈರೇಗೌಡನಿಗೆ ತಿಳಿಸಿದವನು ಸೂರಚಾರಿ. ಈಗ ಅದನ್ನು ಖರೀದಿ ಮಾಡಲು ಮಧ್ಯಸ್ಥಿಕೆಗಾಗಿ ಈರೇಗೌಡ ಸೂರಚಾರಿಯನ್ನೇ ಕರೆದುಕೊಂಡು ಹೊರಟಿದ್ದನು. (ಅವನತಿ, ಪುಟ-೨೧, ಲೇ. ಪೂರ್ಣಚಂದ್ರ ತೇಜಸ್ವಿ) ಗ್ರಾಮೀಣ ಪರಿಸರದಲ್ಲಿರುವ ಲವಲವಿಕೆಯನ್ನು ಈ ಕಥೆ ಹಿಡಿದಿಡುತ್ತದೆ. ಮತ್ತೆ ಭಾಷಿಕವಾಗಿ ಈ ಕಥೆ ಮಹತ್ವದ್ದಾಗಿದೆ. ಹೊಸ ದಿಗಂತದೆಡೆಗೆ ಎಂದು ಸಾರಿದ ತೇಜಸ್ವಿಯವರು ಭಾಷಿಕವಾಗಿಯೂ ಹೊಸದಿಗಂತವನ್ನು ಶೋಧಿಸಿದ್ದು ಈ ಕಥೆಯ ಮುಖಾಂತರ ವ್ಯಕ್ತವಾಗುತ್ತದೆ.

ಭಾಷೆಯು ಸೃಷ್ಟಿಶೀಲ ಸಾಹಿತಿಯ ಬಹು ದೊಡ್ಡ ಕಲಾತ್ಮಕ ಸಾಧನೆ ಎಂಬುದು ನವ್ಯ ಸಾಹಿತ್ಯದ ಪರಿಭಾಷೆಯಾಗಿತ್ತು. ಅದನ್ನು ಮೀರುವಂತಹ ಭಾಷೆಯನ್ನು ವಿಶಿಷ್ಟ ಅಭಿವ್ಯಕ್ತಿ ಮಾಧ್ಯಮವನ್ನಾಗಿ ತೇಜಸ್ವಿಯವರು ಎರಡನೇ ಘಟ್ಟದ ಬರವಣಿಗೆಯಲ್ಲಿ ಬಳಸಿದ್ದಾರೆ.

ಎರಡನೇ ಘಟ್ಟದ ಸಾಹಿತ್ಯ ರಚನೆಯಲ್ಲಿ ಸಾಂಸ್ಕೃತಿಕ, ಸಾಮಾಜಿಕ ವ್ಯಾಪ್ತಿಯನ್ನು ತನ್ನೊಳಗೆ ಅಡಗಿಸಿಕೊಂಡಿರುವ ಭಾಷೆಯು ತನ್ನ ಮುಖಾಂತರ ಅದನ್ನು ಅಭಿವ್ಯಕ್ತಪಡಿಸುತ್ತಿತ್ತು. ಇದನ್ನೇ ಮುರಿದು ಕಟ್ಟುವ ಕ್ರಮ ಎಂದು ಭಾವಿಸಬಹುದು.

ಮೂರನೇ ಘಟ್ಟದ ಬರವಣಿಗೆಯಲ್ಲಿ ಜೀವಕೇಂದ್ರಿತ ನಿಲುವು ವ್ಯಕ್ತವಾದುದರಿಂದ ವೈಜ್ಞಾನಿಕ ಅಂಶಗಳು ಹೆಚ್ಚು ಹೆಚ್ಚಾಗಿ ಕಾಣಿಸಿಕೊಂಡದ್ದರಿಂದ ಭಾಷೆಯು ಮತ್ತಷ್ಟು ಪಳಗಿತು.

ವೈಜ್ಞಾನಿಕ ವಿವರಗಳನ್ನು, ಅರ್ಥೈಸಿಕೊಳ್ಳಲು ಕಷ್ಟವಾಗುವ ವೈಜ್ಞಾನಿಕ ಪರಿಭಾಷೆಗಳನ್ನು ಸರಳ ಭಾಷೆಯಲ್ಲಿ ವಿವರಿಸಿದವರಲ್ಲಿ ಕಾರಂತರನ್ನು ಬಿಟ್ಟರೆ ತೇಜಸ್ವಿಯವರು ನಂತರದ ಸ್ಥಾನದಲ್ಲಿ ನಿಲ್ಲುತ್ತಾರೆ. ತೇಜಸ್ವಿಯವರ ವೈಜ್ಞಾನಿಕ ಬರವಣಿಗೆಗಳಿಗೂ ಸಹ ಕಥೆ ಕಾದಂಬರಿಗಳ ಒಂದು ಲೇಪವಿರುತ್ತದೆ. ಈ ತಂತ್ರವೇ ವಿಜ್ಞಾನದ ವಿವರಗಳನ್ನು ಯಾವುದೇ ತೊಡಕು ಇಲ್ಲದೆ ತೇಜಸ್ವಿಯವರು ಓದುಗರಿಗೆ ತಲುಪಿಸಲು ಸಾಧ್ಯವಾಯಿತು.

''ದುರದೃಷ್ಟವಶಾತ್ ಅವತ್ತು ಆಫ್ರಿಕಾದಿಂದ ಯಾವ ಪಳೆಯುಳಿಕೆಯು ಲಭ್ಯವಿರಲಿಲ್ಲ. ಥಾಮಸ್ ಹಕ್ಸಲೀಯಾ ಊಹೆ ನಿಜವಾಗಲೂ ಇನ್ನೂ ಎಷ್ಟೋ ವರ್ಷಗಳೇ ಬೇಕಿತ್ತು. ಡಾರ್ವಿನ್‌ನ ವಿಕಾಸವಾದಕ್ಕೆ ಬಹಿರಂಗ ಪ್ರತಿಭಟನೆ ಕಡಿಮೆ ಆದರೂ ಸಂಪ್ರದಾಯವಾದಿಗಳು ತಲೆಮರೆಸಿಕೊಂಡು ಗೆರಿಲ್ಲಾ ಮಾದರಿ ಯುದ್ಧ ಮಾಡುತ್ತ ಒಳಗೊಳಗೆ ಅವಹೇಳನ, ಅಪಹಾಸ್ಯ ಮುಂದುವರೆಸಿದ್ದರು. ಡಾರ್ವಿನ ಯಾವ ಕೋತಿಗಳ ಸಮುದಾಯದಿಂದ ಬಂದವನಿರಬಹುದೆಂದು ಲೇವಡಿ ಮಾಡುತ್ತ ಜನ ಒಳಗೊಳಗೇ ನಗುತ್ತಿದ್ದರು.'' (ಪು-೬, ಮಿಸ್ಸಿಂಗ್ ಲಿಂಕ್, ೮ನೇ ಮುದ್ರಣ, ೨೦೦೩, ಲೇ. ಪೂರ್ಣಚಂದ್ರ ತೇಜಸ್ವಿ)

ವಿಜ್ಞಾನದ ವಿಷಯಗಳನ್ನು ಸೃಷ್ಟಿಯ ರಹಸ್ಯಗಳನ್ನು ತಿಳಿಸುವ ಬರಹಗಳಿಗೆ ಕೈಹಾಕಿದ್ದು ತೇಜಸ್ವಿಯವರ ಚಿಂತನೆಗಳು ಮೇಲ್ಮುಖ ಚಲನೆಯಾಗಿ ಕಂಡುಬರುತ್ತದೆ. ವಿಜ್ಞಾನದ ಕ್ಲಿಷ್ಟ ವಿಷಯಗಳನ್ನು ಸಹ ಕಲಾತ್ಮಕವಾಗಿ ಕಟ್ಟಿಕೊಡುವ ಸಾಮರ್ಥ್ಯ ತೇಜಸ್ವಿ ಭಾಷೆಗೆ ಇದೆ. ಕುವೆಂಪುರವರು ವಿಜ್ಞಾನವನ್ನು ರಸಾನುಭೂತಿಯ ರಸಪಥವನ್ನಾಗಿ ಪರಿಗಣಿಸಿದ್ದರು. ಕಲೆ ಏನನ್ನು ಪ್ರತಿಪಾದಿಸುತ್ತದೆಯೋ ಅದಕ್ಕಿಂತ ಭಿನ್ನವಾದುದನ್ನು ವಿಜ್ಞಾನ ಪ್ರತಿಪಾದಿಸುತ್ತದೆ ಎಂದು ಕುವೆಂಪುರವರು ನಂಬಿರಲಿಲ್ಲ. ಅದೇ ನಿಲುವನ್ನು ತೇಜಸ್ವಿಯವರು ಹೊಂದಿದಂತೆ ಕಂಡುಬರುತ್ತದೆ. ಗ್ರಾಮೀಣ ಪರಿಸರದ ಹಿನ್ನೆಲೆಯಿಂದ ಪ್ರಾರಂಭವಾಗುವ ಕರ್ವಾಲೊ ಕಾದಂಬರಿಯು 'ಹಾರುವ ಓತಿ'ಯನ್ನು ಬೆನ್ನತ್ತಿ ಹೋಗುವ ವೈಜ್ಞಾನಿಕ ಶೋಧದೆಡೆಗೆ ತೇಜಸ್ವಿಯವರ ಚಿಂತನೆ ಚಲಿಸುತ್ತಿರುವುದು

ಪಲಾಯನವಾದವಲ್ಲ. ಆ ಚಲನೆಯು ಕೂಡ ಸಹಜವಾಗಿಯೇ ಮೂಡಿಬಂದಿದೆ. ಕನ್ನಡದಲ್ಲಿ ವಿಜ್ಞಾನದ ಸಂಕೀರ್ಣ ವಿಷಯಗಳನ್ನು ತಿಳಿಸುವಾಗ ಭಾಷೆಗೆ ಇರಬೇಕಾದ ಸೂಕ್ಷ್ಮತೆ ಮತ್ತು ಸಾಮರ್ಥ್ಯ ತೇಜಸ್ವಿಯವರ ವೈಜ್ಞಾನಿಕ ಬರಹಗಳಲ್ಲಿದೆ. ಆದ್ದರಿಂದಲೇ ಓದುಗರನ್ನು ತಲುಪುವಲ್ಲಿ ಅದು ಯಶಸ್ವಿಯಾಗಿದೆ. ಸಾಮಾಜಿಕ ಅಂತಸ್ತು. ಲಿಂಗಬೇಧ, ಆರ್ಥಿಕ ಸ್ಥಿತಿ, ವಯಸ್ಸು, ಅನ್ಯ ಭಾಷಾ ಸಂಪರ್ಕದಿಂದ ಒಂದೇ ಸಮುದಾಯದವರ ಭಾಷೆಯಲ್ಲಿ ವ್ಯತ್ಯಾಸಗಳನ್ನು ಕಾಣಬಹುದು.

ತೇಜಸ್ವಿ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳ ಭಾಷೆಯು ಸಹ ವಿಭಿನ್ನವಾಗಿದೆ.

'ಆ ಗೋಸಾಯಿತಿ ಮನೆಗೆ ಮಾಟ ತೆಗೆಯಲು ಬಂದವಳು ಏನೂ ಮಾಡಲಿಲ್ಲ. ಕೃಷ್ಣೇಗೌಡನ ಕೈಯಲ್ಲಿ ಒಂದಷ್ಟು ಹಣ ಕಿತ್ತುಕೊಂಡು ಮಂತ್ರ ಮಾಡುವವಳಂತೆ ನಟಿಸುತ್ತಾ ಕೋಳಿ ಬಲಿಕೊಟ್ಟು ಅದನ್ನು ಬಕ್ಕಣಕ್ಕೆ ಹಾಕಿಕೊಂಡು, ತಲೆಕೆದರಿಕೊಂಡು ದೆವ್ವ ಮೈಮೇಲೆ ಬಂದವರಂತೆ ಹೂಂಕಾರ ಮಾಡಿ ' ಈ ಮನೆ ನಾಲ್ಕು ಮೂಲೇಲಿ ಕಸದಾಗೆ ಕೂದಲು ಹುದುಗಿಸಿಟ್ಟಿದ್ದಾರೆ' ಎಂದು ಎಲ್ಲರನ್ನು ಕರೆದುಕೊಂಡು ನಾಲ್ಕು ಮೂಲೆಗಳಿಗೂ ಹೋಗಿ ತೋಟದ ತರಗೆಲೆ ಒಳಗೆ ಹುಡಕಾಡಿದಂತೆ ಮಾಡಿ ನಾಲ್ಕು ಹಿಡಿ ಕಸ ತೆಗೆದು ಕೊಟ್ಟು'' ಇದರಾಗೆ ಹುಡುಕಿ ನೋಡು ನರ ಮನುಷ್ಯರ ಕೂದಲಾ ಇರ್ತೇತಿ, ತೆಗೆದು ಬೆಂಕ್ಯಾಗೆ ಹಾಕು' ಎಂದು ತನ್ನ ಕರ್ತವ್ಯ ನೆರವೇರಿಸಿದಳು.'' ( ಚಿದಂಬರ ರಹಸ್ಯ, ಪುಟ-೧೪೪, ಲೇ. ಪೂರ್ಣಚಂದ್ರ ತೇಜಸ್ವಿ)

ಗೋಸಾಯಿಗಳು ತಮ್ಮ ಹೊಟ್ಟೆಪಾಡಿಗಾಗಿ ಮಾಟ ತೆಗೆಯುವ ವೃತ್ತಿಯನ್ನು ಅವಲಂಬಿಸಿದ್ದಾರೆ. ದೆವ್ವ ಬಿಡಿಸುವ ನಟನೆಗಳನ್ನು ಮಾಡುತ್ತಾ ಕೋಳಿಯನ್ನು ಬಲಿಕೊಟ್ಟು ತನ್ನದೇ ಆದ ವಿಧಾನಗಳನ್ನು ಅನುಸರಿಸುತ್ತಾ ಮಾಟ ತೆಗೆದಿದ್ದೇನೆ ಎಂದು ಕೃಷ್ಣೇಗೌಡನನ್ನು ನಂಬಿಸುವುದು ಕೆಳವರ್ಗದ ಜನರು, ಮೇಲ್ವರ್ಗದ ಜನರನ್ನು ನಂಬಿಸಿ ಹೊಟ್ಟೆ ಹೊರೆಯುವ ಪರಿಸ್ಥಿತಿ ಇದೆ ಎಂಬುದು ಇದರಿಂದ ತಿಳಿಯುತ್ತದೆ.

ಗೋಸಾಯಿತಿ ಬಳಸುವ ಭಾಷೆಯಲ್ಲಿರುವ ಇದರಾಗೆ, ನರಮನುಷ್ಯ, ಕೂದಲು, ಇರ್ತೈತಿ, ಬೆಂಕ್ಯಾಗೆ ಮುಂತಾದ ಪದಗಳು - ಗೋಸಾಯಿತಿ ಜನಾಂಗದ ಭಾಷೆಯಲ್ಲಿ ರೂಪಾಂತರಗೊಂಡು ಬಳಕೆಯಾಗಿರುವುದು ವಿಶೇಷವಾಗಿದೆ. ಪಾತ್ರಗಳ ಭಾಷೆಯ ಮುಖಾಂತರವೇ ನಮಗೆ ಸಾಮಾಜಿಕ, ಮಾನಸಿಕ ಸ್ವಭಾವವು ಅರವಿಗೆ ಬರುತ್ತದೆ.

'ಅವನು ಯಾವನೋ ನಮ್ಮೂರ ಹಿತ್ತಿಲಿಗೆ ಬಂದು ಸಾಕಿದ ಹಂದಿ ಹೊಡೆದವ?' ನನ್ನ ಕೋಳಿಯನ್ನೆಲ್ಲಾ ಗುಳ್ಳೇ ನರಿಗಳು ಹೊತ್ತವು ಹಂದಿಗಳನ್ನೆಲ್ಲಾ ಕಳ್ಳ ಶಿಕಾರಿಯವರು ಹೊತ್ತರು. ಇದೊಂದು ಹ್ಯಾಗೊ ಉಳಿದಿತ್ತು. ಇವತ್ತು ಅದಕ್ಕೆ ಬಂತು ಕಾಲ ಎಂದು ಗುಟುರು ಹಾಕುತ್ತಾ ಹತ್ತಿರಾದಳು. ಊರಳ್ಳಿಯ ಮೂವರು ಶಿಕಾರಿಯವರಿಗೂ ಉಗ್ರಕೋಪ ಬಂದಿದ್ದರು. ತಾವು ಅವಳಂತೆ ಕಿರುಚಾಡುವುದು ತಮ್ಮ ಘನತೆಗೆ ಕುಂದು ಎಂದೋ ಏನೋ ಅವರ ಹತ್ತಿರ ಬರುವವರೆಗೂ ಮೌನವಾಗಿ ನಿಂತಿದ್ದರು. ಇವರ ಮೌನವನ್ನು ಹೆದರಿ ಮಂಕಾಗಿ ಹೋಗಿದ್ದಾರೆಂದು ತಪ್ಪಾಗಿ ಗ್ರಹಿಸಿ ಬಾಯಮ್ಮ ಇನ್ನಷ್ಟು ಗಟ್ಟಿಯಾಗಿ ಬಾಯಿ ಮಾಡಿದಳು.'' (ಮಾಯಾಲೋಕ-೧, ಪುಟ-೧೩೫, ಲೇ. ಪೂರ್ಣಚಂದ್ರ ತೇಜಸ್ವಿ)

ಬಾಯಮ್ಮನ ಮಾತುಗಳ ಮುಖಾಂತರ ಹಳ್ಳಿಯಲ್ಲಿ ಗಟ್ಟಿಗಿತ್ತಿಯಾಗಿ ಸ್ವಾಭಿಮಾನದಿಂದ ಬದುಕು ನಡೆಸಿದವಳು. ಆದರೆ ಆಕೆಯು ಬದುಕಲು ಸಮಾಜವು ಅವಕಾಶ ಕೊಡುವುದಿಲ್ಲ. ಒಂದಲ್ಲ ಒಂದು ತೊಂದರೆಗಳು ಇದಿರಾಗುತ್ತಲೇ ಇವೆ. ಆದ್ದರಿಂದ ಆಕೆ ರೋಸಿ ಹೋಗಿ ಕಿರುಚಾಡುತ್ತಾಳೆ ಎಂದು ಲೇಖಕರು ಗ್ರಹಿಸಿದ್ದಾರೆ. ಎದುರಾಳಿಗಳು ಮೌನವಾಗಿದ್ದರಿಂದ ಮತ್ತಷ್ಟು ಸಿಟ್ಟಿಗೇಳುವ ಬಾಯಮ್ಮ ತನ್ನ ಸ್ವಭಾವಕ್ಕೆ ತಕ್ಕಂತೆ ಸಿಡಿದೇಳುವ ವರ್ತನೆಗೆ ತಕ್ಕಂತೆ ಹೆಸರಿಗೆ ತಕ್ಕಂತೆ 'ಬಾಯಮ್ಮ' ಆಗಿದ್ದಾಳೆ. ಬಾಯಮ್ಮ ಎಂಬುದು ರೂಢನಾಮವಾಗಿಯು, ಅನ್ವರ್ಥನಾಮವಾಗಿಯು ಇಲ್ಲಿ ಬಂದಿರುವುದು ವಿಶೇಷವಾಗಿದೆ. ಕರ್ವಾಲೊ ಕಾದಂಬರಿಯಲ್ಲಿ ಬರುವ ಮಂದಣ್ಣನ ಪಾತ್ರವು ತನ್ನ ಹೆಸರಿಗೆ ವಿರುದ್ಧವಾಗಿ ವರ್ತಿಸುವುದನ್ನು ಕಾಣಬಹುದು. ಅವನ ಹೆಸರಿಗೂ ಆತನು ಮಾಡುವ ಕೆಲಸಕ್ಕೂ ಒಡೆದು ಕಾಣುವ ವ್ಯತ್ಯಾಸವಿದೆ. ಕರ್ವಾಲೊರವರು ಆತನನ್ನು ಹುಟ್ಟಾ ನ್ಯಾಚರಲಿಸ್ಟ್ ಎಂದು ಹೊಗಳುವುದು ಆತನು ಪ್ರಕೃತಿಯ ಬಗ್ಗೆ ಹೊಂದಿರುವ ಅಪಾರವಾದ ಜ್ಞಾನಕ್ಕೆ ಸಾಕ್ಷಿಯಾಗಿದೆ.

ಮಂದಣ್ಣ ಹಾರುವ ಓತಿಯ ಬಗ್ಗೆ ಕರ್ವಾಲೊಗೆ ಮಾಹಿತಿ ನೀಡಿದರು. ಹಾರುವ ಓತಿಯ ವಿಶಿಷ್ಟತೆ ಬಗ್ಗೆ ಮಂದಣ್ಣನಿಗೆ ಅರಿವಿರುವುದಿಲ್ಲ.

ಹಾರುವ ಓತಿಯ ವಿಷಯವು ಜಗತ್ತನ್ನೇ ಬೆಚ್ಚಿಬೀಳಿಸುವಂತದ್ದು ಅಂತಹ ವಿಷಯವನ್ನು ನಿರೂಪಿಸುವಾಗಲೂ ಮಂದಣ್ಣ ತಣ್ಣಗೆ ನಿರೂಪಿಸುತ್ತಾನೆ.

'ಮಂದಣ್ಣ ಮತ್ತು ಕರ್ವಾಲೊರ ಸಂಬಂಧಗಳು ಊರ ಜನಕ್ಕೆ ಪೋಲಿಸರಿಗೆ ಮತ್ತು ಸಂವೇದನಾಶೀಲನೆಂದು ತೋರುವ ನಿರೂಪಕನಿಗೂ ಅನುಮಾನ ಹುಟ್ಟಿಸುವಂತಿದ್ದರೂ ಈ ಅನುಮಾನದ ಫಲವನ್ನು ಮಂದಣ್ಣನೇ ಹೆಚ್ಚಾಗಿ ಅನುಭವಿಸಬೇಕಾಗಿ ಬರುವುದಕ್ಕೆ ಮುಖ್ಯ ಕಾರಣ. ಅವನ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ' (ತೇಜಸ್ವಿ ಕಥನ, ಪುಟ-೮೩, ಲೇ. ಟಿ.ಪಿ. ಅಶೋಕ, ಪ್ರ. ಅಕ್ಷರ ಪ್ರಕಾಶನ, ಸಾಗರ, ಮೊದಲ ಮುದ್ರಣ ೨೦೦೪) ಮಂದಣ್ಣನ ಆರ್ಥಿಕ ಸ್ಥಿತಿಯನ್ನು ಲೆಕ್ಕಿಸದೆ ಕರ್ವಾಲೊ ಆತನ ಜ್ಞಾನಕ್ಕೆ ಬೆಲೆ ಕೊಡುತ್ತಾರೆ.

ಕಿರಗೂರಿನ ಗಯ್ಯಾಳಿಗಳು ಕತೆಯ ಶೀರ್ಷಿಕೆಯೇ ಸೂಚಿಸುವಂತೆ ಅದು ಸ್ತ್ರೀಕೇಂದ್ರಿತ ಕಥನವಾಗಿ ಮೂಡಿಬಂದಿದೆ. ಗ್ರಾಮೀಣ ಪರಿಸರದ ವಿಶಿಷ್ಟತೆಗಳನ್ನು ಕಿರಗೂರಿನ ಗಯ್ಯಾಳಿಗಳು ಕತೆಯು ಓದುಗರಿಗೆ ತಲುಪಿಸುತ್ತದೆ. ಯಾವುದೇ ಮುಚ್ಚುಮರೆ ಇಲ್ಲದೆ ಈ ಕತೆಯಲ್ಲಿನ ಪಾತ್ರಗಳು ಸಂಭಾಷಿಸುತ್ತವೆ. ಕೆಲವು ಅಶ್ಲೀಲವೆನಿಸಿದರು. ಗ್ರಾಮ್ಯಭಾಷೆಯಲ್ಲಿ ಅವೆಲ್ಲ ಸಹಜವಾಗಿಯೇ ರೂಢಿಯಾಗಿವೆ. ಚಿದಂಬರ ರಹಸ್ಯ ಕಾದಂಬರಿಯ ಜಯಂತಿ ಬಳಸುವ ಭಾಷೆ ಮತ್ತು ಜುಗಾರಿಕ್ರಾಸ್ ಕಾದಂಬರಿಯಲ್ಲಿ ಗೌರಿಯು ಬಳಸುವ ಭಾಷೆ. ಶಿಕ್ಷಿತ ಸ್ತ್ರೀ ಸಮುದಾಯ ಬಳಸುವ ಭಾಷೆಗೆ ಉದಾಹರಣೆಯಾಗಿದೆ.

ತೇಜಸ್ವಿಯವರ ಸ್ವರೂಪ ಕಾದಂಬರಿಯು ನಿರೂಪಣಾ ಧಾಟಿಯಲ್ಲಿ ಮೂಡಿ ಬಂದಿದೆ. 'ನಾನು' ಎಂಬ ಉತ್ತಮ ಪುರುಷ ಸರ್ವನಾಮದಲ್ಲಿ ಕಾದಂಬರಿಯು ನಿರೂಪಣೆ ಸಾಗುತ್ತಾ ಹೋಗುತ್ತದೆ. ನವ್ಯದ ವ್ಯಕ್ತಿಕೇಂದ್ರಿತ ಪ್ರಜ್ಞೆಯು ಭಾಷೆಯ ಮೇಲು ತನ್ನದೇ ಆದ ಪ್ರಭಾವವನ್ನು ಬೀರಿದೆ ಎಂಬುದು ಈ ಕೆಳಗಿನ ನಿದರ್ಶನದಿಂದ ವೇದ್ಯವಾಗುತ್ತದೆ.

''ನೋಡು ಸಂಜೆಯ ನೆರಳಿನಂತೆ ಹೇಗೆ ಬೆಳೆಯುತ್ತದೆ. ನನ್ನ ಚರಿತ್ರೆ ಕತ್ತಲಾದಾಗ ನನ್ನ ನೆರಳೇ ಅನಂತವಾಗಿ ವಿಶಾಲ ತಿರೆಯನ್ನು ತಬ್ಬುತ್ತದೆ. ಮಾತನಾಡು ಹೇಮಂತ ಏಕೆ ಮೌನವಾಗಿದ್ದೀಯಾ ಅಲ್ಲಾ ಮೇಲೆ ಹೇಳಿದ್ದನ್ನು ಬೇರೆ ಮಾತಿನಲ್ಲಿ ಹೇಳುವುದಾದರೆ ಒಂದರ್ಥದಲ್ಲಿ ನನ್ನ ವಿಷಯವೇ ನಿಧಾನವಾಗಿ ನಿನ್ನ ವಿಷಯವಾಗುತ್ತದೆ ಅಲ್ಲವೇ! ನೀನು ಕೆಲವು ನಾಮಪದ, ಕ್ರಿಯಾಪದಗಳನ್ನು ಸಂಗತಿಗಳನ್ನು ಬದಲಿಸಿದರೆ ಸರಿ ಅದು ನೀನೆ ತೊಟ್ಟ ಅಂಗಿಯಾಗುತ್ತದೆ. ಬಿದಿರು ಹಿಂಡಿಲಿನಿಂದ ಒಂದೊಂದೇ ತರಗೆಲೆಯ ಸರಪಳಿ ಹಿಡಿದು ಹಬ್ಬಿ ಇಡೀ ಗಿರಿ, ಕಾಡನ್ನೇ ಆವರಿಸಿದ ಚಿತಾಗ್ನಿಯಾಗುತ್ತೇನೆ ನಾನು. ನಾನು

ಹೇಗೆ ಪಾಪಿ ತಪ್ಪಿತಸ್ಥ ಎನ್ನುವುದನ್ನು ನಾನು ಅರಿತಿದ್ದೇನೆ. ನಾನು ಹೊಡೆದು ಬೀಳಿಸಿದ ಹೆಣದ ಸುತ್ತ ಎಷ್ಟೊಂದು ಜನ ನಿಂತಿದ್ದಾರೆ -ನಾನು, ನಮ್ಮ ತಂದೆ, ತಾಯಿ, ಪ್ರೊಫೆಸರ್ ಲಿಂಗಪ್ಪ, ಟಾಮಿ, ನೀನು''. (ಸ್ವರೂಪ, ಪುಟ-೮೭, ಲೇ. ಪೂರ್ಣಚಂದ್ರ ತೇಜಸ್ವಿ)

ನಿರೂಪಣಧಾಟಿಯೇ ಸ್ವರೂಪ ಕಾದಂಬರಿಯ ಲಕ್ಷಣವಾಗಿದೆ. ಎಲ್ಲಾ ಮನುಷ್ಯರ ಸ್ವರೂಪವೆನ್ನುವುದು ಒಂದೇ ಆಗಿದೆ. ಅದು ಬೇರೆ ಬೇರೆಯಲ್ಲ. ನಾಮಪದಗಳನ್ನು, ಕ್ರಿಯಾಪದಗಳನ್ನು ಸಂಗತಿಗಳನ್ನು ಬಳಸಿದರೆ ಅದು ಬೇರೊಬ್ಬ ಮನುಷ್ಯನ ಸ್ವರೂಪವಾಗುತ್ತದೆ. ಒಬ್ಬ ಮನುಷ್ಯನ ಸ್ವರೂಪವನ್ನು ನಿರ್ಧರಿಸುವಲ್ಲಿ ಭಾಷಾ ಅಂಶಗಳಾದ 'ನಾಮಪದ' 'ಕ್ರಿಯಾಪದ'ಗಳು ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ. ''ಒಳ್ಳೆ ಕೊಬ್ರಿ ಹಂಗಿದೆ. ಶಾಖ ತಾಗಿಸದೇ ತಿನ್ನಬೋದು ಎಂದು ಲಾಲಾಜಲ ಸಂಮಿಶ್ರಿತ ಬಾಯಲ್ಲಿ ಅದನ್ನು ಹೊಗಳತೊಡಗಿದ.'' ''ಒಳ್ಳೆದು ಕಣೊ ಆದರೆ ಯಾರಿಗೂ ಹಂದಿ ಮಾಂಸ ತಂದುಕೊಟ್ಟ ಅಂತ ಹೇಳಬೇಡ ! ಕಣೊ ಎಂದೆ ( ಕರ್ವಾಲೊ, ಪು-೨೩, ಲೇ. ಪೂರ್ಣಚಂದ್ರ ತೇಜಸ್ವಿ) ನಿರೂಪಕನು ಪಾತ್ರದೊಂದಿಗೆ ಸಂಭಾಷಣೆ ನಡೆಸುತ್ತಿರುವುದು ಕ್ರಿಯೆಯಲ್ಲಿ ಬಾಗಿಯಾಗಿಯೇ, ಲಾಲಾಜಲ ಸಂಮಿಶ್ರಿತ ಎಂಬ ಪದವನ್ನು ಪಾತ್ರವನ್ನು ಕುರಿತಾದಂತೆ 'ವ್ಯಂಗ್ಯವಾಗಿ' ಬಳಸಿದ್ದಾರೆ ಎಂದೆನಿಸುತ್ತದೆ. ತೇಜಸ್ವಿಯವರ ವಿಡಂಬನಾ ಮನೋಭಾವ ಇಲ್ಲಿ ವ್ಯಕ್ತವಾಗಿದೆ.

ವಿದ್ಯುತ್ತಂತಿಗೆ ತಾಗಿ ಲೈನ್ ಟ್ರಿಪ್, ಆಗಿರಬಹುದು ಇದೆಲ್ಲಾ ಮಲೆನಾಡಿನಲ್ಲಿ ಮಾಮೂಲಿ ಕಂಪ್ಲೇಂಟು, ರೈತರು ತಾಳ್ಮೆಯಿಂದ ಡಿಪಾಟ್‌ಮೆಂಟಿನ ಜೊತೆ ಸಹಕರಿಸಬೇಕು.

ಸರ್ಕಾರ ಘೋಷಿಸಿರುವ ವೇಳಾಪಟ್ಟಿ ಹೊರತಾಗಿ ಪವರ್‌ಕಟ್ ಮಾಡುವ ಅಧಿಕಾರವೇ ತನಗಿಲ್ಲವೆಂದೂ ರೈತರು ಹೇಳುತ್ತಿರುವುದೆಲ್ಲಾ ಸುಳ್ಳು ಎಂದು ಹೇಳಿದ (ಮಾಯಾಲೋಕ-೧, ಪು-೧೧೭, ಲೇ. ಪೂರ್ಣಚಂದ್ರ ತೇಜಸ್ವಿ) ಲೈನ್ ಟ್ರಿಪ್, ಕಂಪ್ಲೇಂಟು, ಡಿಪಾರ್ಟ್‌ಮೆಂಟ್, ಪವರ್‌ಕಟ್ ಎಂಬ ಇಂಗ್ಲೀಷ್ ಪದಪುಂಜಗಳು ಕನ್ನಡ ವಾಕ್ಯದೊಳಗೆ ನುಸುಳಿವೆ. ಇಂತಹ ಅನೇಕ ಉದಾಹರಣೆಗಳು ತೇಜಸ್ವಿ ಸಾಹಿತ್ಯದೊಳಗೆ ದೊರಕುತ್ತವೆ. ಇಂಗ್ಲೀಷ್ ವ್ಯಾಕರಣ ನಿಯಮಗಳಿಗೆ ಅನುಗುಣವಾಗಿ ರಚಿತವಾಗಿರುವ ಈ ಪದಗಳು ಕರ್ನಾಟಕದ ಗ್ರಾಮ ಸಮುದಾಯದ ಸುಶಿಕ್ಷಿತ ಪಾತ್ರಗಳ ಭಾಷೆಗಳಲ್ಲಿ ಲೀಲಾಜಾಲವಾಗಿ ಉಪಯೋಗಕ್ಕೆ ಒಳಗಾಗಿರುವುದು ಮತ್ತು ಆ ಪದಗಳು ಸಂವಹನಕ್ಕೆ ಯಾವುದೇ ಅಡೆತಡೆಯನ್ನು ಒಡ್ಡದಿರುವುದು ಭಾಷಾಮಿಶ್ರಣದ ವಿಶೇಷವಾಗಿದೆ. ''ನಾ

ಏಕೆ ಇದರ ಬಗ್ಗೆ ಒದರಾಡ್ತೀನಿ ಅಂತ ತಾನೇ ನಿನ್ನದು ನಾನು ನೀನು ಮೊದಲೇ ಹೇಳಿದಂತೆ ಬರಹಗಾರನಲ್ಲೇನಯ್ಯ! ಅದಕ್ಕೆ, ಭಾಷೆ ಮನುಷ್ಯನ ಇತ್ಯರ್ಥ ಶಕ್ತಿಯ ಈಚಿಗಿನದು ಬಂದೆ, ತಿಂದೆ, ನಡೆದೆ, ಕುಳಿತೆ, ಎಲ್ಲಾ ಒಂದರ ಬಗ್ಗೆ ಮಾನವ ನಿರ್ಧರಿಸೋದಕ್ಕೆ ಸಾಧ್ಯವಾದ ನಂತರ ಬಂದವು. (ತ್ಯಕ್ತ ಪುಟ-೧೧೨, ಲೇ. ಪೂರ್ಣಚಂದ್ರ ತೇಜಸ್ವಿ) ಭಾಷೆಯು ಮನುಷ್ಯನ ಇತ್ಯರ್ಥ ಶಕ್ತಿಯ ಈಚಿಗಿನದು ಮನುಷ್ಯ ರೂಢಿಸಿಕೊಂಡ ನಂತರ ಬಂದದ್ದು ಎಂದು ಭಾಷೆಯ ಬಗ್ಗೆ ಚಿಂತನೆಯನ್ನು ನಡೆಸುತ್ತಿರುವುದು ತೇಜಸ್ವಿಯವರು ಭಾಷೆಯ ಬಗ್ಗೆ ಹೊಂದಿದ್ದ ನಿಲುವನ್ನು ವ್ಯಕ್ತಪಡಿಸುವಂತಿದೆ.

''ಏನೋ ಮಾತನಾಡಬೇಕೆನಿಸಿತು ಮತ್ತೇ ಹಾಗೆ ಬೇಸರವಾಯ್ತು ನೂರೆಂಟು ಅರ್ಥದಲ್ಲಿ ನೂರಾರು ಜನ ಉಪಯೋಗಿಸಿರುವ ಮಾತಿನಲ್ಲಿ ನನಗೆ ಏನನ್ನಿಸುತ್ತದೆಯೋ ಅದನ್ನು ನಾನು ಹೇಳಲಾರೆ ಎಂದೆನ್ನಿಸಿತು. ಮಾತಿನ ಮೇಲೆ ಅಸಹ್ಯವಾಯ್ತು.''. (ತ್ಯಕ್ತ, ಪು-೧೯೯, ಲೇ. ಪೂರ್ಣಚಂದ್ರ ತೇಜಸ್ವಿ) ಹೊಸ ಅಭಿವ್ಯಕ್ತಿ ಕ್ರಮಕ್ಕೆ ಹಾತೊರೆಯುತ್ತಿರುವ ನಿರೂಪಕನ ಮನಸ್ಸು ಮಾತಿನ ಬಗ್ಗೆ ಇರುವ ಬೇಸರವನ್ನು ವ್ಯಕ್ತಪಡಿಸುವಂತಿದೆ. ಭಾಷೆ ಎನ್ನುವುದು ಒಂದು ರೀತಿಯ ತೊಡಕಾಗಿ ಪರಿಣಮಿಸಿರುವುದನ್ನು ನಿರೂಪಕನ ಮಾತುಗಳು ತಿಳಿಸುತ್ತವೆ. ತೇಜಸ್ವಿಯವರು ತಮ್ಮ ತ್ಯಕ್ತ ಕತೆಯಲ್ಲಿ ಭಾಷೆ ಮನುಷ್ಯರ ನಡುವೆ ಸಂಬಂಧ ಕಲ್ಪಿಸುವ ಬದಲು ಹೇಗೆ ಗೋಡೆಯಾಗಬಲ್ಲದೆಂಬುದನ್ನು ಲೇಖಕನ ಒಬ್ಬಂಟಿತನ ಮತ್ತು ಚಿಕ್ಕ ಮಗುವಿನ ಭಾಷಾತೀತ ಅನುಭವಗಳನ್ನು ಮಂಡಿಸಿ ಹೇಳಿದ್ದಾರೆ.'' (ಪ್ರಸ್ತುತ, ಪು-೬೭, ಲೇ. ಲಂಕೇಶ್, ಲಂಕೇಶ್ ಪ್ರಕಾಶನ) ಭಾಷೆ ಎಂಬುದು ಸಂಬಂಧಗಳನ್ನು ಕಲ್ಪಿಸುವಲ್ಲಿ ಪ್ರಮುಖ ಪಾತ್ರವಹಿಸಬೇಕೇ ಹೊರತು ಅದು ಗೋಡೆಯಾಗುವುದು ತನ್ನ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸುವುದರಲ್ಲಿ ಸೋಲುತ್ತಿದೆ ಎಂಬ ಅಭಿಪ್ರಾಯ ವ್ಯಕ್ತವಾಗಿದೆ.

ತೇಜಸ್ವಿಯವರ ಕಾದಂಬರಿಗಳಲ್ಲಿ ಸ್ಕೆಚ್ ಮತ್ತು ರೇಖಾಚಿತ್ರಗಳು ಸಹ ಅಭಿವ್ಯಕ್ತಿಯಾಗಿ ಕೆಲಸ ಮಾಡಿವೆ. ಭಾಷೆಯಲ್ಲಿ ಸಾಧ್ಯವಾಗದ ಅಭಿವ್ಯಕ್ತಿಯನ್ನು ಸ್ಕೆಚ್ ಮತ್ತು ರೇಖಾಚಿತ್ರಗಳು ಸಾಧ್ಯವಾಗಿಸಬಹುದೇನೋ ಎಂಬ ಕಲ್ಪನೆ ಮೂಡುತ್ತದೆ. ಚಿದಂಬರ ರಹಸ್ಯ, ಜುಗಾರಿಕ್ರಾಸ್ ಮತ್ತು ಕರ್ವಾಲೊ ಕಾದಂಬರಿಗಳಲ್ಲಿ ಈ ವಿಶಿಷ್ಟ ಅಭಿವ್ಯಕ್ತಿ ತಂತ್ರವು ಬಳಕೆಯಾಗಿದ್ದು ಓದುಗರಿಗೆ ಹೊಸ ಕಲ್ಪನಾ ಲೋಕವನ್ನು ತೆರೆದುಕೊಡುತ್ತವೆ.

'ಈ ಕೃತಿಯಲ್ಲಿ ಹಾಸು ಹೊಕ್ಕಾಗಿರುವ ಸ್ಕೆಚ್ ಮತ್ತು ರೇಖಾಚಿತ್ರಗಳು ಸಾಂದರ್ಭಿಕ ವಿವರಣೆಯಾಗಿ ಕೊಟ್ಟಿರುವ ಚಿತ್ರಗಳಲ್ಲಿ ಕೆಲವೆಡೆಗಳಲ್ಲಿ ಹಾಗೆ ಕಂಡುಬಂದರೂ ಅದು ಕೇವಲ ಆಕಸ್ಮಿಕವಷ್ಟೇ ಹೊರತು ಉದ್ದೇಶ ಪೂರ್ವಕವಲ್ಲ. ಇದೊಂದು ಕೊಲಾಜ್ ಮಾದರಿಯ ಕಲಾಕೃತಿ, ಇಲ್ಲಿನ ಕಥಾಪ್ರತಿಮೆಗಳು, ದೃಶ್ಯ ಪ್ರತಿಮೆಗಳು ಓದುತ್ತಾ ಹೋದಂತೆ ಒಂದರ ಮೇಲೊಂದು ಸಂಯೋಜನೆಗೊಳ್ಳುತ್ತಾ ಮಾಯಾಲೋಕವನ್ನು ಸೃಷ್ಟಿಸುತ್ತವೆ. ಇದೊಂದು ಬೆಟ್ಟು ತೋರಿಸಿ ನಿರ್ದೇಶಿಸಲಾರದಷ್ಟು ಸೂಕ್ಷ್ಮ ಮತ್ತು ಪರೋಕ್ಷ ಸಂವಹನ ಕ್ರಿಯೆಯಾದುದರಿಂದ ನಾನು ಇದಕ್ಕಿಂತ ಹೆಚ್ಚಿನ ವಿವರಣೆ ಕೊಡಲಾರೆ.''

ಮಾಯಾಲೋಕ ಕಾದಂಬರಿಯ ಮುನ್ನುಡಿಯಲ್ಲಿ ಲೇಖಕರು ಸ್ಕೆಚ್ ಮತ್ತು ರೇಖಾಚಿತ್ರಗಳ ಬಗ್ಗೆ ತಿಳಿಸಿರುವುದು ಭಾಷೆಗಿಂತ ಮಿಗಿಲಾದ ಅಭಿವ್ಯಕ್ತಿ ಕ್ರಮವನ್ನು ತೇಜಸ್ವಿ ರೂಪಿಸಿಕೊಳ್ಳಲು ಹವಣಿಸುತ್ತಿರಬಹುದೇ ಎಂದೆನಿಸುತ್ತದೆ.

ಸಾಂದರ್ಭಿಕ ವಿವರಣೆಯನ್ನು ಈ ರೇಖಾಚಿತ್ರಗಳು ನೀಡುವುದಿಲ್ಲ ಹಾಗೆ ಕಂಡುಬಂದರೂ ಅದು ಆಕಸ್ಮಿಕವಲ್ಲವೆಂದು ತೇಜಸ್ವಿಯವರೇ ಹೇಳಿದ್ದಾರೆ. ಸ್ಕೆಚ್ ಮತ್ತು ರೇಖಾಚಿತ್ರಗಳು ತಮ್ಮ ಇರುವಿಕೆಯ ಮುಖಾಂತರ ಮಾಯಾಲೋಕ ಕತೆಯನ್ನು ಬೆಳೆಸುವುದರಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಕರ್ವಾಲೊ ಕಾದಂಬರಿಯಲ್ಲಿ ಬರುವ ರೇಖಾಚಿತ್ರಗಳು ಕಾದಂಬರಿಯ ಅಂತಃಸತ್ವವನ್ನು ತೆರೆದಿಟ್ಟಿವೆ ಎಂದು ತೇಜಸ್ವಿ ಹೇಳುತ್ತಾರೆ. ಭಾಷೆಯ ಜೊತೆಗೆ ರೇಖಾಚಿತ್ರಗಳು ಓದುಗನಿಗೆ ಹೊಸ ಅನುಭವ ಲೋಕವನ್ನು ಕಟ್ಟಿಕೊಡುವುದು ವಿಶಿಷ್ಟವೇ ಸರಿ.

ಸ್ಕೆಚ್ ಮತ್ತು ರೇಖಾಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮತ್ತೊಂದು ಜೀವನಕ್ರಮವು ಓದುಗರ ಮುಂದೆ ತೆರೆದುಕೊಳ್ಳುತ್ತದೆ. ತೇಜಸ್ವಿ ಕಾದಂಬರಿಗಳ ಭಾಷೆ ದಿನನಿತ್ಯ ಬಳಸುವ ಭಾಷೆಗಿಂತ ಭಿನ್ನವಾದುದ್ದಲ್ಲ. ಭಾಷೆಯ ಬಳಕೆಯ ಬಗ್ಗೆ ನಿಯಮಗಳನ್ನು ರೂಪಿಸಿಕೊಂಡು ಸಾಹಿತ್ಯ ರಚನೆಗೆ ತೊಡಗಿದವರಲ್ಲ, ಸಾಹಿತ್ಯಕೃತಿಯ ಭಾಷೆಯು ತನ್ನ ಗುರಿಗಳನ್ನು ವಿವರಿಸಬೇಕೇ ವಿನಃ ಅದರ ವಿಶೇಷತೆಯನ್ನಲ್ಲ. ತೇಜಸ್ವಿಯವರಿಗೆ ಈ ರೀತಿಯ ಭಾಷೆಯು ಏಕೆ ಅನಿವಾರ್ಯವಾಯಿತು ಎಂಬ ಪ್ರಶ್ನೆ ಮುಖ್ಯವಾದುದು. ವ್ಯಾಕರಣ ನಿಯಮಗಳನ್ನು ಮೀರಿ ಬಳಕೆಯಾಗುವ ಭಾಷೆಯಲ್ಲಿ ಸಂವಾದವು ಹೆಚ್ಚು 'ಆಪ್ತತೆ'ಯನ್ನು ತಂದುಕೊಡುತ್ತದೆ. ಈ ಆಪ್ತತೆಯು ಕಥಾನಕದಲ್ಲಿರುವ

ಅನುಭವಗಳನ್ನು ತಮ್ಮ ಅನುಭವಗಳೊಂದಿಗೆ ಓದುಗರು ತುಲನೆ ಮಾಡಲು ಸಾಧ್ಯವಾಗುತ್ತದೆ.

ಅನುಭವದ ಬೆನ್ನೇರಿ ತೇಜಸ್ವಿಯವರು ಮೈಸೂರಿನಿಂದ ಮೂಡಿಗೆರೆಗೆ ಬಂದಾಗ, ಆ ಪರಿಸರವನ್ನು ತನ್ನ ಭಾಷೆಯಲ್ಲಿ ಮರುಸೃಷ್ಟಿಸಿದ್ದು ತೇಜಸ್ವಿಯವರ ವಿಶಿಷ್ಟತೆ' ಜೀವನಕ್ರಮವನ್ನು ದಾಖಲಿಸುವಾಗ ಆ ಒಂದು ಸಮುದಾಯದ ಭಾಷೆ ವಿಶೇಷವಾಗಿ ನಿಲ್ಲುತ್ತದೆ. ತೇಜಸ್ವಿಯವರು ತಮ್ಮ ಕಾದಂಬರಿಗಳಲ್ಲಿ ಪಾತ್ರಗಳಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿದಾಗ ಅವುಗಳಿಗಿರುವ ವಿಶಿಷ್ಟ ಅನುಭವ ಲೋಕ ತೆರೆದುಕೊಳ್ಳುತ್ತದೆ. ಆ ಒಂದು ಅನುಭವಲೋಕಕ್ಕೆ ಧಕ್ಕೆಯಾಗದಂತೆ ತಾವು ಸಹ ಕ್ರಿಯೆಯಲ್ಲಿ ಪಾಲ್ಗೊಂಡು, ಆ ಒಂದು ಸಮುದಾಯದ ಭಾಷೆಯನ್ನು, ಅಭಿವ್ಯಕ್ತಿ ಮಾಧ್ಯಮವಾಗಿ ಬಳಸಿದ್ದಾರೆ ಎಂದು ಹೇಳಬಹುದು. ತೇಜಸ್ವಿಯವರಿಗೆ ಭಾಷೆಯು ವಾಸ್ತವತೆಯನ್ನು ಕಟ್ಟಿಕೊಡುವಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದೆ. ತೇಜಸ್ವಿ ಸಾಹಿತ್ಯದಲ್ಲಿ ಬಳಸುವ ಭಾಷೆಯು ಹಲವಾರು ಸಂಪ್ರದಾಯಗಳು ಮುರಿಯುತ್ತದೆ. ಧರ್ಮ, ಜಾತಿ, ಸಂಕೀರ್ಣ ವಿಷಯಗಳನ್ನು ಯಾವುದೇ ತೊಡಕಿಲ್ಲದಂತೆ ನಿರೂಪಿಸುವುದು ತೇಜಸ್ವಿಯವರ ಭಾಷೆಯ ವಿಶೇಷತೆ, ತೇಜಸ್ವಿಯವರ ಒಳಗೆ ಇದ್ದ ಗ್ರಾಮ ಸಮುದಾಯಗಳು ಅವುಗಳು ಎದುರಿಸುತ್ತಿರುವ ಸವಾಲುಗಳು ಇವುಗಳನ್ನು ಯಾವುದೇ ಸಂಕೋಚವಿಲ್ಲದೆ, ದ್ವಂದಕ್ಕೆ ಎಡೆಮಾಡಿ ಕೊಡದೆ ಕಟ್ಟಿಕೊಡುತ್ತಾರೆ. ಆದ್ದರಿಂದಲೇ ತೇಜಸ್ವಿಯವರ ಬರವಣಿಗೆಗೆ ವೈನೋದಿಕತೆ ಪ್ರಾಪ್ತವಾಗಿದೆ.

ಭಾಷೆಯನ್ನು ಸೌಷ್ಠವಗೊಳಿವಂತ ಕಾರ್ಯದಲ್ಲಿ ತೇಜಸ್ವಿಯವರ ಸಾಹಿತ್ಯ ಯಶಸ್ವಿಯಾಗಿದೆ ಎಂದು ಹೇಳಬಹುದು. ಪಾತ್ರಗಳ ಜಗತ್ತನ್ನು ಅವುಗಳ ಮಾತಿನಲ್ಲೇ ತೋರಿಸುತ್ತ ವ್ಯಾಖ್ಯಾನದಲ್ಲಿ ಆ ಜಗತ್ತಿಗೊಂದು ಹೊಸ ಅರ್ಥವನ್ನು ಕಟ್ಟಿಕೊಡುತ್ತಾ ಗ್ರಾಮೀಣ ಪರಿಸರದ ಬಗ್ಗೆ ಇದ್ದಂತಹ ಕಾಳಜಿಗಳನ್ನು ತೇಜಸ್ವಿ ವ್ಯಕ್ತಪಡಿಸಿದ್ದಾರೆ. ತೇಜಸ್ವಿಯವರ ಬರವಣಿಗೆಯ ಮತ್ತೊಂದು ಲಕ್ಷಣ ವಿಶ್ವಾತ್ಮಕತೆ, ಗೊಂದಲಗೇರಿ, ಕೆಸರೂರು, ಜುಗಾರಿ ಕ್ರಾಸ್ ಇವುಗಳು ಭಾರತದ ಯಾವುದೇ ಮೂಲೆಯಲ್ಲಿಯೇ ನಿರ್ಮಾಣವಾಗುವಂತವು. ಅವುಗಳಿಗೆ ನಾವು ಪ್ರಾದೇಶಿಕವಾಗಿ ಚೌಕಟ್ಟನ್ನು ಹಾಕುವಂತಹ ಕ್ರಮ ಸರಿಯಲ್ಲವೆನಿಸುತ್ತದೆ.

ಹೀಗೆ ತೇಜಸ್ವಿಯವರ ಕಾದಂಬರಿಗಳಲಿ ಭಾಷೆಯು ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಮಹತ್ವದ ಪಾತ್ರವನ್ನು ವಹಿಸಿ ತನ್ನ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದೆ.

# ಅಧ್ಯಾಯ - ೫

## ತೇಜಸ್ವಿ ಕಾದಂಬರಿಗಳ ಪಾತ್ರಗಳ ಚಿತ್ರಣ

ತೇಜಸ್ವಿಯವರ ಮೊದಲ ಘಟ್ಟದ ಕಾದಂಬರಿಗಳಲ್ಲಿ ಪುರುಷ ಪಾತ್ರಗಳು ಪ್ರಮುಖವಾದ ಪಾತ್ರವನ್ನು ವಹಿಸಿವೆ ಮೊದಲ ಘಟ್ಟವು ವ್ಯಕ್ತಿ ಕೇಂದ್ರಿತ ಅಧ್ಯಯನವಾಗಿರುವುದರಿಂದ ಪಾತ್ರಗಳ ಸೃಷ್ಟಿ ಆ ನಿಟ್ಟಿನಲ್ಲಿಯೇ ಮೂಡಿಬಂದಿದೆ. ಕಾದಂಬರಿ ಕರತಲ ರಂಗಭೂಮಿ, ಅಂಗೈಮೇಲಣ ನಾಟಕಶಾಲೆ. ಆದ್ದರಿಂದ ಕಾದಂಬರಿಯನ್ನು ಓದುವ ವಾಚಕರು ನಾಟಕವನ್ನು ನೋಡುವ ಪ್ರೇಕ್ಷಕರು ಆಗಬೇಕಾಗುತ್ತದೆ. ಆದ್ದರಿಂದ ಪಾತ್ರಗಳ ಸೃಷ್ಟಿ ಅತ್ಯಂತ ಸೂಕ್ಷ್ಮವಾಗಿ ಮೂಡಿಬರುವುದು ಒಳ್ಳೆಯದು. ತೇಜಸ್ವಿಯವರ ಸ್ವರೂಪ ಕಾದಂಬರಿಯ ಶ್ರೀನಿವಾಸ ಎಂಬ ಪಾತ್ರದ ನಿರೂಪಣೆಯ ಮುಖಾಂತರ ತನ್ನ ಕಥಾ ಭಿತ್ತಿಯನ್ನು ನಿರೂಪಿಸುತ್ತದೆ. ನವ್ಯದ ಅಬ್ಬರದ ಕಾಲದಲ್ಲಿ ರಚಿತವಾದ ಈ ಕಾದಂಬರಿಯಲ್ಲಿ ಪಾತ್ರಗಳ ವಿಶೇಷತೆಯನ್ನು ಗುರುತಿಸುವುದು ತುಸು ಕಷ್ಟವೇ, ನಿಗೂಢ ಮನುಷ್ಯರು ಕಾದಂಬರಿಯಲ್ಲಿ ರಂಗಪ್ಪನ ಪ್ರಜ್ಞೆಯ ಮುಖಾಂತರ ಕತೆ ಅವಲೋಕಿತವಾಗಿದೆ. ಇದು ವ್ಯಕ್ತಿ ಕೇಂದ್ರಿತವಾಗಿಯೇ ಮುಖ್ಯವೆನಿಸುತ್ತದೆ. ಗೋಪಾಲಯ್ಯ, ರಂಗಪ್ಪ, ಜಗನ್ನಾಥ, ಎಲ್ಲರು ತಮ್ಮ ನಿಜಸ್ವರೂಪವನ್ನು ಮರೆಮಾಚಿ 'ನಿಗೂಢತೆಯನ್ನು ಕಾಯ್ದುಕೊಳ್ಳುವುದನ್ನು ನೋಡಬಹುದು. ನಿಗೂಢ ಮನುಷ್ಯರು ಕಾದಂಬರಿಯಲ್ಲಿ ಉಗ್ರಗಿರಿಯು ಸಹ ಪ್ರಮುಖವಾದ ಪಾತ್ರವಾಗಿ ಮೂಡಿಬಂದಿರುವುದು ಕಾದಂಬರಿಯ ಮಹತ್ವ ಹೆಚ್ಚಿಸಿದೆ. ಇದಲ್ಲದೆ ಕಾದಂಬರಿಯಲ್ಲಿ ಬರುವ ಮರಸರ, ಕಾಂಪ್ರ, ಕುಳುಪ ಎಂಬ ಪಾತ್ರಗಳು ವಿಭಿನ್ನವಾದ ಸಾಂಸ್ಕೃತಿಕ ಲೋಕವನ್ನು ತೆರೆದಿಡುತ್ತವೆ. ಶಾರಿ ಎಂಬ ಹೆಣ್ಣು ಪಾತ್ರವು ಬಂದರೂ, ಪ್ರಧಾನವಾಹಿನಿಗೆ ಬರದಂತೆ, ಕಾದಂಬರಿಯಲ್ಲಿದೆ. ಮೌನವಾಗಿಯೇ ಇರುವ ಶಾರಿಯ ಪಾತ್ರ ವಿಶೇಷವೆನಿಸಿದೆ. ಈ ಪಾತ್ರಗಳಲ್ಲಿ ಬದುಕನ್ನು ಅರ್ಥರಹಿತವಾಗಿ ಗ್ರಹಿಸುವ ನೆಲೆಯಲ್ಲಿ ಕಾದಂಬರಿಯು ಮುಂದುವರೆಯುತ್ತದೆ.

ನಿಗೂಢ ಮನುಷ್ಯರು ಕಾದಂಬರಿಯಲ್ಲಿ ಕೇಂದ್ರ ಪಾತ್ರವಾದ ಗೋಪಾಲಯ್ಯ ಮತ್ತು ಅಂಚಿನ ಪಾತ್ರಗಳಾದ ಮರಸರ, ಕಾಂಪ್ರ ಇವರ ನಡುವಿನ ಸಂಬಂಧ ಪ್ರಧಾನ ಮತ್ತು ಅಧೀನ ನೆಲೆಯಲ್ಲಿಯೇ ಕಂಡುಬರುತ್ತದೆ. ತೇಜಸ್ವಿ ಕಾದಂಬರಿಗಳ ಒಲವು ಹೆಚ್ಚಾಗಿ ತರುಣ ಪಾತ್ರಗಳ ಕಡೆಗೆ ಇರುವುದು ಉಲ್ಲೇಖನೀಯ. ಚಿದಂಬರ ರಹಸ್ಯ ಕಾದಂಬರಿಯಲ್ಲಿ

ಬರುವ ರಾಮಪ್ಪ, ಚಂದ್ರ, ಜೋಸೆಫ್, ಅಂಗಾರ, ರಮೇಶ, ರಫಿ, ಜಯಂತಿ, ಯುವ ಜನಾಂಗದಿಂದಲೇ ರೋಗಗ್ರಸ್ತ ಸಮಾಜವನ್ನು ಬದಲಾಯಿಸಬಹುದು ಎಂಬ ಪ್ರಜ್ಞೆ ಇದರ ಹಿಂದೆ ಕೆಲಸ ಮಾಡಿರಬಹುದು. 'ಒಟ್ಟಿನಲ್ಲಿ ಕ್ರಾಂತಿ ಆಗಬೇಕಪ್ಪಾ' ಎಂಬ ವಾಕ್ಯದೊಂದಿಗೆ ಪ್ರಾರಂಭವಾಗುವ ಚಿದಂಬರ ರಹಸ್ಯ ಕಾದಂಬರಿಯು ಸುಧಾರಣೆಗಿಂತ ಬದಲಾವಣೆಯನ್ನು ತನ್ನೊಳಗೆ ಅಡಗಿಸಿಕೊಂಡಿದೆ. ಆ ಬದಲಾವಣೆಗಾಗಿ ಯುವ ಪಾತ್ರಗಳು ತುಡಿಯುತ್ತವೆ. ತಮ್ಮದೇ ಆದ ಆದರ್ಶಗಳನ್ನಿಟ್ಟುಕೊಂಡು ಬದಲಾವಣೆಗಾಗಿ ತುಡಿಯುತ್ತವೆ.

ಜುಗಾರಿ ಕ್ರಾಸ್ ಕಾದಂಬರಿಯಲ್ಲಿ ಬರುವ ಸುರೇಶ-ಗೌರಿಯರು ಸಹ ಯಾರ ಮಾತಿಗೂ ಕಿಮ್ಮತ್ತು ನೀಡದೇ ವ್ಯವಸಾಯದಲ್ಲಿ ನಾನಾ ಪ್ರಯೋಗಗಳನ್ನು ಮಾಡಿ ಆರ್ಥಿಕವಾಗಿ ನಷ್ಟ ಹೊಂದಿ, 'ಜುಗಾರಿ ಕ್ರಾಸ್' ಎಂಬ ಚಕ್ರವ್ಯೂಹದೊಳಗೆ ಸಿಲುಕಿ ಪಾರಾಗುವ ಕತೆ ರೋಚಕವಾದದ್ದು. ತೇಜಸ್ವಿಯವರು ಮುಖ್ಯವಾಗಿ ಈ ಎರಡು ಪಾತ್ರಗಳ ಮೇಲೆ ಆ ಹೆಚ್ಚಾದ ಒತ್ತನ್ನು ಕೊಟ್ಟು ನಿರೂಪಿಸಿದ್ದಾರೆ. ಅತಿ ಬುದ್ಧಿವಂತಿಕೆಯಿಂದ ಈ ಪಾತ್ರಗಳು ವರ್ತಿಸುತ್ತವೆ. ಗೌರಿಯು ಜುಗಾರಿ ಕ್ರಾಸ್ ಎಂಬ ಭೂಗತ ಲೋಕದೊಳಗೆ ಸಿಲುಕಿದರು ಭಯಗೊಳ್ಳದೆ ಧೈರ್ಯದಿಂದ ಬಂದ ಸವಾಲುಗಳನ್ನೆಲ್ಲ ಎದುರಿಸುವ ಬಗೆ ಮಾದರಿಯಾಗಿದೆ. ಕೆಲವರು ತೇಜಸ್ವಿಯವರು ಸ್ತ್ರೀಪಾತ್ರಗಳ ಬಗ್ಗೆ ಅಷ್ಟು ಫೋಕಸ್ ಮಾಡುವುದಿಲ್ಲ ಎಂದು ಆರೋಪಿಸಿದ್ದಾರೆ. ಆದರೆ ಈ ಅಪವಾದವು ಗೌರಿ ಪಾತ್ರವನ್ನು ಚಿತ್ರಿಸುವ ಬಗೆಯಿಂದ ಅಳಿಸಿಹೋಗುತ್ತದೆ. ಸುರೇಶ-ಗೌರಿಯರ ಪಾತ್ರಗಳು ಜೀವನದ ಬಗ್ಗೆ ಪ್ರೀತಿಯುಳ್ಳ ಪಾತ್ರಗಳಾಗಿ ಕಂಡುಬಂದಿವೆ. ಕರ್ವಾಲೊ ಕಾದಂಬರಿಯಲ್ಲಿ ಮುಖ್ಯವಾಗಿ ಕಂಡುಬರುವ ಪಾತ್ರವೆಂದರೆ ಮಂದಣ್ಣ ಆತನ ಹೆಸರಿಗೂ ಆತನ ಕೆಲಸಕ್ಕೆ ವಿರೋಧವಿರುವುದು ಕಂಡುಬರುತ್ತದೆ. ಕರ್ವಾಲೊ ಎಂಬ ವಿಜ್ಞಾನಿಯೇ ಮಂದಣ್ಣನನ್ನು ಹೊಗಳಿ ಮಾತನಾಡುವುದು ಆತನ ಪ್ರತಿಭೆಗೆ ಹಿಡಿದ ಕನ್ನಡಿಯಾಗಿದೆ. ದೇಸಿ ಪ್ರತಿಭೆಯ ಕೀಟಶಾಸ್ತ್ರಜ್ಞನಾಗಿ, ಪರಿಸರ ವಿಜ್ಞಾನಿಯಾಗಿ ಮಂದಣ್ಣ ಕಂಡುಬರುತ್ತಾನೆ. ಸುಶಿಕ್ಷಿತ ಪಾತ್ರವಾದ ಕರ್ವಾಲೊ ದೇಸಿ ಪಾತ್ರವಾದ ಮಂದಣ್ಣನೊಂದಿಗೆ ಸಂಶೋಧನೆ ನಡೆಸುವುದು ವಿಶೇಷವಾಗಿ ಕಂಡುಬರುತ್ತದೆ. ಜಾಗತೀಕರಣದಿಂದ, ಆಧುನಿಕತೆಯಿಂದ ದೇಸಿಯತೆಯ ಮೇಲೆ ಆಗುತ್ತಿರುವ ಪರಿಣಾಮಗಳನ್ನು ಗಮನಿಸಿದರೆ ಮಂದಣ್ಣನನ್ನು 'ದೇಸಿ' ಪ್ರತಿಭೆಯ ಸಂಕೇತವಾಗಿ ಚಿತ್ರಿಸಿರುವ ತೇಜಸ್ವಿ ಕರ್ವಾಲೊ ಮತ್ತು ಮಂದಣ್ಣನನ್ನು ಜೊತೆಗೆ

ಕೊಂಡೊಯ್ಯುವುದರ ಮುಖಾಂತರ ಸಮನ್ವಯತೆಯನ್ನು ಸಾಧಿಸಿದ್ದಾರೆ. ವಿಜ್ಞಾನಿಯಾದ ಕರ್ವಾಲೊ ಹಳ್ಳಿಗರ ದೃಷ್ಟಿಯಲ್ಲಿ ಹುಚ್ಚನಂತೆ, ಕ್ಷುಲ್ಲಕ ವ್ಯಕ್ತಿಯಂತೆ ಕಂಡುಬರುವುದು ದುರಾದೃಷ್ಟವೇ ಸರಿ. ಗ್ರಾಮ ಸಂಸ್ಕೃತಿಯೊಂದು ವಿಜ್ಞಾನವನ್ನು ಗ್ರಹಿಸುವ ವಿಧಾನವು ಇದರಿಂದ ತಿಳಿಯುತ್ತದೆ. ಚಿದಂಬರ ರಹಸ್ಯ ಕಾದಂಬರಿಯಲ್ಲಿ ಬರುವ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಪಾಟೀಲರು ಸಹ ಇಂತಹ ಗೋಜಲಿಗೆ ಸಿಲುಕಿಹಾಕಿಕೊಳ್ಳುತ್ತಾರೆ. ಮಾಟಮಾಡುವ, ಮಂತ್ರಹಾಕುವ, ಸನ್ಯಾಸಿಯಂತೆ ಕೆಸರೂರಿನ ಜನರು ಭಾವಿಸುತ್ತಾರೆ. ತರಲೆಗಳು ಸೃಷ್ಟಿಸುವ ವಿಚಾರಗಳಿಗೆ ಪಾಟೀಲರು ಉತ್ತರಕೊಡುವಂತ ವಾತಾವರಣ ಸೃಷ್ಠಿಯಾಗುವುದು ಹಳ್ಳಿಗರ ಮೂಢನಂಬಿಕೆಯನ್ನು ಎತ್ತಿಹಿಡಿಯುತ್ತದೆ.

ತೇಜಸ್ವಿಯವರ ಕಾದಂಬರಿಗಳ ಅತ್ಯಂತಿಕ ಸ್ಥಿತಿ ದಾರ್ಶನಿಕತೆಯ ಹುಡುಕಾಟ ಈ ಹುಡುಕಾಟಗಳಿಗಾಗಿ ಅಲೆಮಾರಿಯಾಗಿ ಹೋಗುವುದು ವಿಶೇಷವೆನಿಸುತ್ತದೆ. ಕರ್ವಾಲೊ ಕಾದಂಬರಿಯಲ್ಲಿ ಬರುವ ನಿರೂಪಕ ಕರ್ವಾಲೊ ಇವರೆಲ್ಲ ಹಾರುವ ಓತಿಯನ್ನು ಬೆನ್ನತ್ತಿಹೋಗುವುದು ಅಲೆಮಾರಿತನಕ್ಕೆ ಮತ್ತು ದಾರ್ಶನಿಕತೆಯ ಹುಡುಕಾಟಕ್ಕೆ ಉದಾಹರಣೆಯಾಗಿವೆ.

ಕಾನೂರು ಹೆಗ್ಗಡತಿಯ ಕಾದಂಬರಿಯಲ್ಲಿ ಬರುವ ಹೂವಯ್ಯ ಹಳ್ಳಿಗೆ ಮರಳಿದರು. ಮ್ಯಾಥ್ಯೂ ಅರ್ನಾಲ್ಡ್‌ನನ್ನು ಓದುವುದು ಪರಕೀಯತೆಯನ್ನು ಸೂಚಿಸುತ್ತದೆ. ಆದರೆ ತೇಜಸ್ವಿಯವರು ನಗರದಿಂದ ಹಳ್ಳಿಯ ಕಡೆಗೆ ಚಲಿಸುವುದನ್ನು ಕಾರಂತರ ಮರಳಿ ಮಣ್ಣಿಗೆ ಅಡಿಗರ ಮಣ್ಣಿನ ವಾಸನೆ ಈ ಪರಿಕಲ್ಪನೆಗಳಿಗೆ ಹೋಲಿಸಬಹುದು. ಕರ್ವಾಲೊ ಕಾದಂಬರಿಯಲ್ಲಿ 'ಕಿವಿ' ಎಂಬ ನಾಯಿಯು ಒಂದು ಪಾತ್ರವಾಗಿ ಕಾಣಿಸಿಕೊಳ್ಳುವುದು ಮತ್ತು ನಿರೂಪಕನ ಜೊತೆ ಸದಾ ಕಾಣಿಸಿಕೊಳ್ಳುವುದು ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾಗಿದೆ. ಜೇನುನೊಣಗಳು ಕೂಡ ಕಾದಂಬರಿಯಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಮನುಷ್ಯನು ಪ್ರಕೃತಿಯನ್ನು ಎದುರುಹಾಕಿಕೊಳ್ಳಲಾರ ಎಂಬ ಸಂದೇಶ ಜೇನುನೊಣಗಳ ದೃಶ್ಯದಿಂದ ವೇದ್ಯವಾಗುತ್ತದೆ. ತೇಜಸ್ವಿಯವರ ಸಾಹಿತ್ಯದಲ್ಲಿ ಜೀವನ ಪ್ರೀತಿಯುಳ್ಳ ಪಾತ್ರಗಳ ಕಡೆಗೆ ತೇಜಸ್ವಿಯವರ ಒಲವು ಹೆಚ್ಚಾಗಿದೆ. ಮಾಯಾಲೋಕ ಕಾದಂಬರಿಯಲ್ಲಿ ಬರುವ ಕರಾಟೆ ಮಂಜ ತನ್ನ ಹೊಟ್ಟೆಪಾಡಿಗಾಗಿ ಯಾವುದೇ ಕೆಲಸವನ್ನು ಮಾಡಲು ಸಿದ್ಧನಿರುತ್ತಾನೆ ಫೋಟೋಗ್ರಾಫರ್, ವರದಿಗಾರ, ಪಾನಿಪೂರಿ ಮಾರುವವ, ಎಳನೀರು ಮಾರುವವ, ನಾನಾ ರೀತಿಯ ವೃತ್ತಿಗಳನ್ನು ಕರಾಟೆ ಮಂಜ ಕೈಗೊಳ್ಳುತ್ತಾನೆ. ಬಹಳ ಒಲವಿನಿಂದ ಈ

ಪಾತ್ರವನ್ನು ತೇಜಸ್ವಿಯವರು ಪೋಷಿಸುತ್ತಾರೆ. ಅಣ್ಣಪ್ಪನೆಂಬ ಕುತಂತ್ರಿಯು ಚಾಣಾಕ್ಷತೆಯಿಂದ ತನ್ನ ಮಾತುಗಳಿಂದ ಎಲ್ಲರನ್ನು ಮರಳು ಮಾಡುವ ಗುಣವನ್ನು ಹೊಂದಿದ್ದಾನೆ. ಇಕ್ಬಾಲ್ ಎಂಬುವನು ಪಕ್ಕದ ಹಳ್ಳಿಯವರ ಮೇಲೆ ಮಾಡುವ ಪುಕಾರುಗಳು, ಹಳ್ಳದ ನೀರಿಗಾಗಿ ಮಾಡುವ ಜಗಳ, ತಮ್ಮ ಪಾಲಿನ ಮೀನನ್ನು ಹಿಡಿದಿದ್ದಾರೆಂದು ಅವರ ಮೇಲೆ ಕತ್ತಿಮಸೆಯುವುದು, ಕುಡಿಯುವ ನೀರನ್ನು ಊರಳ್ಳಿಯವರು ಮೆಣಸಿನ ಮಡಿಗಳಿಗೆ ಬಿಟ್ಟಿದ್ದಾರೆಂದು ತಹಶೀಲ್ದಾರರಿಗೆ ಕಂಪ್ಲೇಂಟ್ ಕೊಡಿಸುವುದು, ಇಂತಹ ಕ್ಷುಲ್ಲಕ ವಿಚಾರಗಳೊಂದಿಗೆ ಕಾದಂಬರಿಯು ಸಾಗುತ್ತದೆ. ಮಾಯಾಲೋಕ ಕಾದಂಬರಿಯಲ್ಲಿ ಯಾವ ಒಂದು ಪಾತ್ರವು ಮುಖ್ಯವಲ್ಲ. ಯಾವ ಪಾತ್ರವು ಅಮುಖ್ಯವಲ್ಲ ಎಂಬ ಮಾತು ಕಾದಂಬರಿಗೆ ಅನ್ವಯಿಸುತ್ತದೆ. ಕ್ಷುಲ್ಲಕ ವಿಷಯಗಳು ಹೇಗೆ ಜೀವನವನ್ನು ನಿರ್ಧರಿಸುತ್ತವೆ ಎಂಬುದನ್ನು ತೇಜಸ್ವಿಯವರು ಮಾಯಾಲೋಕ ಕಾದಂಬರಿಯಲ್ಲಿ ಸೂಕ್ಷ್ಮವಾಗಿ ಸೆರೆಹಿಡಿದ್ದಾರೆ . ಲೇಖಕನಿಗೆ ಜಾತಿಯ ಪ್ರಜ್ಞೆ, ಪ್ರಾದೇಶಿಕತೆ ಇವುಗಳ ಬಗ್ಗೆ ವ್ಯಾಮೋಹವಿದ್ದರೆ ಸತ್ಯವನ್ನು ಮರೆಮುಚ್ಚುತ್ತಾನೆ. ಆದರೆ ಅದನ್ನೆಲ್ಲಾ ಮೀರಿ ತೇಜಸ್ವಿಯವರು ವಾಸ್ತವವನ್ನು ತೆರೆದಿಡುವಲ್ಲಿ ತಮ್ಮ 'ಕಾದಂಬರಿಯಲ್ಲಿ ವಿಶೇಷ ಕಾಳಜಿ ವಹಿಸಿದ್ದಾರೆ. ಮಾಯಾಲೋಕ ಕಾದಂಬರಿಯಲ್ಲಿ ಬರುವ ಬಾಯಮ್ಮ, ಫಾತಿಮಾ, ರುಕ್ಮಿಣಿ ಎಲ್ಲಾ ಪಾತ್ರಗಳು ಸಹ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಪ್ರತಿರೋಧವನ್ನು ತೋರುತ್ತವೆ. ತಮ್ಮ ಮೇಲೆ ಆಗುತ್ತಿರುವ ಅಕ್ರಮಣಗಳ ವಿರುದ್ಧ ತಿರುಗಿ ಬೀಳುತ್ತವೆ.

ಸ್ತ್ರೀವಾದಿ ದೃಷ್ಟಿಕೋನದಿಂದಲೂ ಬಾಯಮ್ಮ, ಫಾತಿಮಾ, ರುಕ್ಮಿಣಿ ಇವರ ಪಾತ್ರಗಳು ಮಹತ್ವವಾಗಿವೆ. ಯಾವ ಗಂಡಸಿನ ಸಹಾಯವು ಇಲ್ಲದೇ ಜೀವನವನ್ನು ಸಾಗಿಸುವ ಮತ್ತು ಮಕ್ಕಳನ್ನು ಪೋಷಿಸುವ ಫಾತಿಮಾಳ ಪಾತ್ರವು ಅನುಕರಣೀಯ. ಅಲ್ಲದೆ ಧರ್ಮದ ಕಟ್ಟುಪಾಡುಗಳನ್ನು ಸಹ ಮೀರಿ ಫಾತಿಮಾ ತನ್ನ ಬದುಕನ್ನು ರೂಪಿಸಿಕೊಂಡಿದ್ದಾಳೆ. ಧಾರ್ಮಿಕ ಮೂಲ ಭೂತವಾದಿಗಳ ಕುತಂತ್ರಕ್ಕೆ ಬಲಿಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ಫಾತಿಮಾ ತನ್ನ ಧೈರ್ಯದಿಂದ ಸ್ತ್ರೀ ಕುಲಕ್ಕೆ ಮಾದರಿಯಾಗಿದ್ದಾಳೆ.

ಬಾಯಮ್ಮ ಮತ್ತು ರುಕ್ಮಿಣಿಯ ಪಾತ್ರಗಳು ಬದುಕನ್ನು ಎದುರಿಸುವ ಪರಿ ಕಾದಂಬರಿಯಲ್ಲಿ ವಿಶೇಷವಾಗಿ ಮೂಡಿ ಬಂದಿದೆ. ಬದುಕಿನ ಬಗ್ಗೆ ಇರುವ ಪ್ರೀತಿಯು ಮತ್ತು ಬದುಕಲು ಮಾಡಬೇಕಾದ ನಾನಾ ರೀತಿಯ ಕಸರತ್ತುಗಳನ್ನು ಈ ಪಾತ್ರಗಳು ಮಾಡಿ ಬದುಕಿನ ಬಗ್ಗೆ ಹೊಸ ದೃಷ್ಟಿಕೋನವನ್ನು ಈ ಪಾತ್ರಗಳು ಓದುಗರಿಗೆ ಮೂಡಿಸುತ್ತವೆ.

ಕಿರಗೂರಿನ ಗಯ್ಯಾಳಿಗಳು ಕತೆಯಲ್ಲಿ ಬರುವ ಪಾತ್ರಗಳು ಸಿಡಿದೇಳುವ ರೀತಿಯು ವಿಭಿನ್ನವಾಗಿದೆ. ಈ ಪಾತ್ರಗಳ ಬಯ್ಗುಳಗಳು ಅಶ್ಲೀಲವೆನಿಸಿದರೂ ಆ ಒಂದು ಪರಿಸರಕ್ಕೆ ಸಹಜವೆಂಬಂತೆ ಕಂಡುಬಂದಿದೆ. ಈ ರೀತಿಯ ಪ್ರತಿರೋಧವನ್ನು ತೋರುವ ಪಾತ್ರಗಳು ಕನ್ನಡ ಸಾಹಿತ್ಯದಲ್ಲಿ ಕಡಿಮೆ ಎನ್ನಬಹುದು. ಇವುಗಳ ಪ್ರತಿರೋಧದ ಸ್ವರೂಪ ಅತ್ಯಂತಿಕ ಸ್ಥಿತಿಯನ್ನು ತಲುಪಿದೆ. ಇಲ್ಲಿ ಪುರುಷ ಲೋಕಕ್ಕಿಂತ ಸ್ತ್ರೀಕೇಂದ್ರಿತವಾಗಿ ಕಥಾನಕವು ಸಾಗುತ್ತದೆ. ಇಲ್ಲಿನ ಸ್ತ್ರೀ ಪಾತ್ರಗಳು ಯಾವುದೇ ಅಳುಕಿಲ್ಲದೆ ತಮ್ಮ ಬದುಕುವ ಹಕ್ಕಿಗಾಗಿ ಹೋರಾಟ ನಡೆಸುತ್ತವೆ. ಹೀಗೆ ನಾನಾ ರೀತಿಯ ಪಾತ್ರಗಳನ್ನು ಚಿತ್ರಿಸುವುದರ ಮುಖಾಂತರ ವಿಭಿನ್ನ ಸಾಂಸ್ಕೃತಿಕ ಲೋಕವನ್ನು ತೇಜಸ್ವಿ ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

# ಅಧ್ಯಾಯ - ೬

## ಸಮಾರೋಪ

ಕನ್ನಡ ಸಾಹಿತ್ಯದಲ್ಲಿ ತೇಜಸ್ವಿಯವರು ತಮ್ಮ ವಿಶಿಷ್ಟ ಚಿಂತನೆಯಿಂದ ವಿಭಿನ್ನವಾಗಿ ಕಾಣಿಸಿಕೊಳ್ಳುತ್ತಾರೆ. ತಮ್ಮ ಚಿಂತನೆಗಳನ್ನು ಯಾವುದೇ ಹಂಗಿಗೆ ಒಳಗಾಗದೇ ನಿರೂಪಿಸಿದ್ದಾರೆ. ಸಾಹಿತ್ಯದ ಬಹು ಪ್ರಕಾರಗಳಲ್ಲಿ ಬರೆಯುವ ತೇಜಸ್ವಿ ಮಾನವೀಯ ನೆಲೆಯಲ್ಲಿ ತಮ್ಮ ಚಿಂತನೆಗಳನ್ನು ರೂಪಿಸಿದ್ದಾರೆ. ಸಿದ್ಧಾಂತಗಳ ಹಂಗನ್ನು ಪ್ರಕಾರಗಳ ಹಿಡಿತವನ್ನು, ಮೀರಿದ ತೇಜಸ್ವಿ ಕಾಲವನ್ನು ಗ್ರಹಿಸುವ ಬಗೆ ಸಮಕಾಲೀನವಾಗಿದೆ. ಕಾಲ ಕಾಲಕ್ಕೆ ತಮ್ಮ ಸಾಹಿತ್ಯವನ್ನು ತಾವು ತಾಳುತ್ತಿರುವ ನಿಲುವುಗಳನ್ನು ತಾವೇ ವಿಮರ್ಶಿಸಿಕೊಂಡು ಹೊಸ ದಿಗಂತದೆಡೆಗೆ ಸಾಗಿದ್ದು ಅವರ ದರ್ಶನ ಪ್ರಜ್ಞೆಯ ಪ್ರತೀಕ.

ತೇಜಸ್ವಿಯವರ ಸಾಹಿತ್ಯದ ಶೋಧನಾಗುಣ ಕೇವಲ ಆದರ್ಶಕ್ಕೋಸ್ಕರ ರೂಪಿತವಾದುದ್ದಲ್ಲ. ವಿಸ್ಮಯಗಳ ಮುಂದೆ, ಶಿಶು ಸಹಜ ಕುತೂಹಲದಿಂದ ಅನುಭವಗಳ ಬೆನ್ನೇರಿ ಹೊರಟ ದಾರ್ಶನಿಕ ಬೆಳವಣಿಗೆ.

ಸುಧಾರಣೆಗಿಂತ ಬದಲಾವಣೆ ತೇಜಸ್ವಿ ಸಾಹಿತ್ಯದ ವಿಶಿಷ್ಟತೆ, ರಚನಾತ್ಮಕ ಬದಲಾವಣೆಗಳಿಗೋಸ್ಕರ ತಮ್ಮ ಸಾಹಿತ್ಯರಚನಾ ಕ್ರಮವನ್ನು ಬದಲಾಯಿಸಿಕೊಂಡರು. ನಿಗೂಢ ಮನುಷ್ಯರು ಮತ್ತು ಸ್ವರೂಪ ಕಾದಂಬರಿಯ ಕಾಲಘಟ್ಟ, ಅಬಚೂರಿನ ಪೋಸ್ಟಾಫೀಸು ಕಥಾಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ಹೊಸ ದಿಗಂತದೆಡೆಗೆ ಎಂದು ಘೋಷಿಸಿದ್ದು ಮಾಯಾಲೋಕ ಕಾದಂಬರಿಯ ಮುನ್ನುಡಿಯಲ್ಲಿ ಅಂತಹುದೇ ರಚನಾತ್ಮಕ, ಸಮಾಜಮುಖಿ ಬದಲಾವಣೆಯ ಕಡೆಗೆ ತೇಜಸ್ವಿ ಸಾಹಿತ್ಯ ಚಲಿಸುತ್ತಿರುವುದು ಸೃಷ್ಟಿಶೀಲ ಲೇಖಕನ ಲಕ್ಷಣ. ಈ ಚಲನೆ ಎನ್ನುವುದು ಕೇವಲ ಬೌದ್ಧಿಕ ಚಟುವಟಿಕೆಯಾಗಿ, ಆತ್ಮವಿಮರ್ಶೆಯಾಗಿ ನಿಲ್ಲದೆ 'ಸಮಾಜಮುಖಿ'ಯಾದದ್ದು ತೇಜಸ್ವಿ ಸಾಹಿತ್ಯದ ಜೀವಂತಿಕೆಯನ್ನು ಪ್ರತಿಬಿಂಬಿಸುತ್ತದೆ. ಕಲಾ ಪ್ರಪಂಚದಲ್ಲಿ ಕೈಗೊಂಡ ಕೃಷಿಯನ್ನು ತೇಜಸ್ವಿಯವರು ವಿಜ್ಞಾನ ಪ್ರಪಂಚದಲ್ಲಿಯು ಕೈಗೊಂಡರು. ಕಲಾ ಪ್ರಪಂಚದ ಬರವಣಿಗೆಯು ದಿಢೀರನೆ ವಿಜ್ಞಾನದ ಪ್ರಪಂಚದ ಕಡೆಗೆ ತಿರುಗಿದ್ದು ಆಕಸ್ಮಿಕವಲ್ಲ. ಕುವೆಂಪುರವರು ವಿಜ್ಞಾನವನು ಕೂಡಾ ರಸಾನುಭೂತಿಯ ರಸಪಥವನ್ನಾಗಿ ಪರಿಗಣಿಸಿದ ವಿಶಿಷ್ಟ ದೃಷ್ಟಿಯಿಂದ ತೇಜಸ್ವಿ ಪ್ರೇರಣೆ ಪಡೆದಿರಬಹುದೇ ? ಎಂಬ ಪ್ರಶ್ನೆ ಮುಖ್ಯವಾಗುತ್ತದೆ.

ತೇಜಸ್ವಿಯವರೇ ಹೇಳುವಂತೆ ಲೋಹಿಯಾರವರ ತತ್ವಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನ ದೃಷ್ಟಿ ಮತ್ತು ಬದುಕಿನ ಪ್ರಯೋಗಶೀಲತೆ ತನ್ನ ಈಚಿನ ಸಾಹಿತ್ಯದ ಮೇಲೆ ಪರಿಣಾಮವನ್ನುಂಟುಮಾಡಿವೆ. ಲೋಹಿಯಾರವರ ಸಮಾಜವಾದಿ ನಿಲುವುಗಳು ತೇಜಸ್ವಿ ಕಾದಂಬರಿಗಳಲ್ಲಿ ವ್ಯಕ್ತವಾಗಿವೆ. ಚಿದಂಬರ ರಹಸ್ಯ ಈ ನಿಟ್ಟಿನಲ್ಲಿ ಯಶಸ್ವಿಯಾಗಿದೆ. ಜಾತ್ಯಾತೀತ, ಧರ್ಮಾತೀತ, ಭಾರತವನ್ನು ನಿರ್ಮಿಸುವ ಉದ್ದೇಶ ತೇಜಸ್ವಿಯವರ ಆಂತರ್ಯದಲ್ಲಿತ್ತು ಎಂಬುದನ್ನು ಚಿದಂಬರ ರಹಸ್ಯ ಪ್ರತಿಪಾದಿಸುತ್ತದೆ. ಕಾರಂತರ ಜೀವನದೃಷ್ಟಿ, ಜೀವನವನ್ನು ಪ್ರೀತಿಯಿಂದ ಯೋಚನೆಗಳು ತೇಜಸ್ವಿಯವರು ಸೃಷ್ಟಿಸಿರುವ ಪಾತ್ರಗಳ ಮುಖಾಂತರ ಕಾಣಸಿಗುತ್ತದೆ. ಕುವೆಂಪುರವರ ಕಲಾಸೃಷ್ಟಿಯ ವಿಶಿಷ್ಟತೆಗಳನ್ನು ತೇಜಸ್ವಿ ಸಾಹಿತ್ಯ ಪ್ರತಿನಿಧಿಸುತ್ತದೆ. ಲೇಖಕನನ್ನು ರೂಪಿಸಿದ ಪ್ರಭಾವಿಸಿದ ಅಂಶಗಳನ್ನು ತನ್ನ ಸಾಹಿತ್ಯ ಕೃಷಿಯಲ್ಲಿ ತಂದ ಹಿರಿಮೆ ತೇಜಸ್ವಿಯವರದು.

ವಾಕ್ ಪರಂಪರೆಯು ತನ್ನದೇ ಆದ ಸಂಸ್ಕೃತಿಯನ್ನು ಹೊಂದಿರುತ್ತದೆ. ಆ ಸಂಸ್ಕೃತಿಯು ಮೌಖಿಕವಾಗಿಯೇ ವ್ಯಕ್ತವಾಗುತ್ತದೆ. ಮಂಟೇಸ್ವಾಮಿ ಮಹಾಕಾವ್ಯ, ಮಲೆಯ ಮಹದೇಶ್ವರ ಮಹಾಕಾವ್ಯ ಈ ನಿಟ್ಟಿನಲ್ಲಿ ಮಹತ್ವವೆನಿಸಿದೆ. ಜನರಾಡುವ ಭಾಷೆಯಲ್ಲೇ ಒಂದು ಸಂಸ್ಕೃತಿ ಕಥನ ನಿರೂಪಿಸಲ್ಪಡುತ್ತದೆ. ಹೀಗೆ ನಿರೂಪಿಸಲ್ಪಡುವ ಕಥನ ಸಾಂಸ್ಕೃತಿಕ ಅನನ್ಯತೆಯನ್ನು ಪ್ರದರ್ಶಿಸುತ್ತದೆ. ಅದೇ ನಿಟ್ಟಿನಲ್ಲಿ ಒಂದು ಸಾಹಿತ್ಯ ಕೃತಿಯ ಭಾಷೆಯು ಕೇವಲ ಭಾಷೆಯಾಗಿ ಬಳಕೆಯಾಗದೆ, ಸಂಸ್ಕೃತಿಯನ್ನು ಕಟ್ಟಿಕೊಡುವ 'ಪ್ರತಿನಿಧಿ'ಯಾಗಿ, ತನ್ನೊಳಗೆ ಸಂಸ್ಕೃತಿಯನ್ನು ಅಡಗಿಸಿಕೊಂಡಿರುವ 'ಸಾಂಸ್ಕೃತಿಕ'ದಾಖಲಾತಿಯಾಗಿ ಭಾಷೆ ಕಂಡುಬರುತ್ತದೆ. ಸಂಸ್ಕೃತಿಯ ವಿಚಾರದಲ್ಲಿ ಭಾಷೆಯು ವ್ಯಾಕರಣದ ಗಡಿಗಳನ್ನು ಮೀರಿ ಬಳಕೆಯಾಗುತ್ತದೆ. ಶಂ.ಬಾ.ಜೋಷಿಯವರು ಭಾಷೆಯನ್ನು ಸಂಸ್ಕೃತಿಯ ಅಂಗವಾಗಿಯೇ ಗ್ರಹಿಸುವ ಸಂಶೋಧನಾ ವಿಧಾನವೂ ಕನ್ನಡ ಸಂಶೋಧನೆಯಲ್ಲಿ ಅದ್ವಿತೀಯವಾಗಿದೆ. ಅದೇ ನಿಟ್ಟಿನಲ್ಲಿ ತೇಜಸ್ವಿಯವರ ಭಾಷೆಯು ಕಟ್ಟಿಕೊಡುವ ಸಾಂಸ್ಕೃತಿಕ ಜಗತ್ತು. ಅಂಚಿನ ಪಾತ್ರಗಳ ಸಹ ಮಾತನಾಡುವ ಅವಕಾಶ, ತೇಜಸ್ವಿಯವರ ಕಾದಂಬರಿಗಳ ಭಾಷೆಯಲ್ಲಿದೆ. ಭಾಷೆಯೆಂಬುದು ಸಾಂಪ್ರದಾಯಗಳನ್ನು ಮುರಿದು ತನ್ನದೇ ಆದ ವಿಶಿಷ್ಟ ಮಾರ್ಗವನ್ನು ಸಂಶೋಧಿಸಿಕೊಳ್ಳುತ್ತದೆ. ತೇಜಸ್ವಿಯವರ ಭಾಷೆಯು ಒಂದು ವರ್ಗದ ಸ್ವತ್ತಾಗದೆ ಮಾನವೀಯ ನೆಲೆಯಲ್ಲಿ ಎಲ್ಲರ ಉಸಿರಾಗಿದೆ. ತೇಜಸ್ವಿಯವರ ಭಾಷೆಗೆ ಬೇಲಿಗಳಿಲ್ಲ, ಚೌಕಟ್ಟುಗಳಿಲ್ಲ. ಅನಾಗರೀಕ ಪಾತ್ರಗಳಂತೆ ಕಂಡುಬರುವ ಮರಸರ, ಕಾಂಪ್ರ, ಕುಳುಪ

'ಮಾತನಾಡಿ' ತಮ್ಮ ಸಾಂಸ್ಕೃತಿಕ ಜಗತ್ತನ್ನು ಅಭಿವ್ಯಕ್ತಿಸುತ್ತಾರೆ. ಈ ಅಭಿವ್ಯಕ್ತಿ ಎನ್ನುವುದು ಕಾದಂಬರಿಯ ಒಂದು ತಂತ್ರವಲ್ಲ. ಮಾನವೀಯತೆಯನ್ನು ನೆಲೆಯಾಗಿಸಿ ಸಮಾಜವನ್ನು ಕಾಣುವ ಲೇಖಕನ ವಿಶಾಲ ಪ್ರಜ್ಞೆಯ ಸಂಕೇತ. ಒಂದು ಭಾಷೆಯು ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾದರೆ 'ಸಾಂಸ್ಕೃತಿಕ' ಎನ್ನುವ ಪರಿಕಲ್ಪನೆಯ ಹಿಂದೆ ಇರುವ ಹಲವಾರು ವಿಸ್ಮಯಗಳನ್ನು ತನ್ನ ಒಡಲೊಳಗೆ ಅಡಗಿಸಿಕೊಂಡಿರುವ ಪ್ರಕೃತಿಯ ಅಧ್ಯಯನವು ಸಹ ವಿಶಿಷ್ಟವೇ. ಸಂಸ್ಕೃತಿಯ ಹಿಂದಿನ ಹಂತವೇ ಪ್ರಕೃತಿ, ಅಂತಹ ಪ್ರಕೃತಿಯು ತೇಜಸ್ವಿಯವರ ಕಾದಂಬರಿಯಲ್ಲಿ ವಹಿಸಿರುವ ಪಾತ್ರದ ಬಗ್ಗೆ ವಿವೇಚಿಸಲಾಗಿದೆ. ಪ್ರಕೃತಿಯನ್ನು ಕೇವಲ ಜಡವಸ್ತುವನ್ನಾಗಿ ಗ್ರಹಿಸದೇ ಚೇತನ ಸ್ವರೂಪಿಯಾಗಿ ಮಾನವನ ಬದುಕಿನಲ್ಲಿ ಅದು ವಹಿಸುವ 'ಪಾತ್ರದ ವಿಶಿಷ್ಟತೆ' ಬಗ್ಗೆ ಚರ್ಚಿಸಲಾಗಿದೆ. ಭಾಷೆಯ ಮುಖಾಂತರ ಸಂಸ್ಕೃತಿಯು ಅಭಿವ್ಯಕ್ತಿಗೊಂಡರೆ, 'ಸಂಸ್ಕೃತಿ' ಎಂಬ ಪರಿಕಲ್ಪನೆಯನ್ನು ಕಾದಂಬರಿಯು ಗ್ರಹಿಸಿರುವ ಕ್ರಮದ ಬಗ್ಗೆ ದೃಷ್ಟಿ ಹರಿಸಲಾಗಿದೆ. ತೇಜಸ್ವಿಯವರ ಕಾದಂಬರಿಗಳ ವಿಶಿಷ್ಟತೆ ಪಾತ್ರಚಿತ್ರಣ. ಪಾತ್ರ ಚಿತ್ರಣದ ವಿಶಿಷ್ಟತೆ ಪಾತ್ರಗಳ ಅಂತಃಸತ್ವಗಳನ್ನು ಹಿಡಿದಿಡುವ ಮತ್ತು ಅವುಗಳಿಂದ ಹೊಮ್ಮುವ ಜೀವನ ಪ್ರೀತಿಯನ್ನು ವ್ಯಕ್ತಪಡಿಸುವ ರೀತಿಯು ವಿಶಿಷ್ಟವಾಗಿದೆ. ತೇಜಸ್ವಿ ಕಾದಂಬರಿಗಳ ಅಧ್ಯಯನವು ನಮಗೆ ಪ್ರಧಾನವಾಗಿ ಮೂರು ಘಟ್ಟಗಳಾಗಿ ಒಡೆದು ತೋರುತ್ತವೆ. ಆ ಒಡೆಯುವಿಕೆಗೆ ಕಾರಣವಾದಂತಹ ಸಾಂಸ್ಕೃತಿಕ ಸಾಹಿತ್ಯಕ ಭಾಷಿಕ, ವಿವರಗಳನ್ನು ದಾಖಲಿಸಲಾಗಿದೆ. ತೇಜಸ್ವಿಯವರ ಮೇಲೆ ಪ್ರಭಾವ ಬೀರಿದ ರಾಷ್ಟ್ರಕವಿಯಾದ ಕುವೆಂಪುರವರ ಪ್ರಕೃತಿ ಪ್ರೇಮವನ್ನು ವಿವರಿಸಲಾಗಿದೆ. ತೇಜಸ್ವಿ ಕಾದಂಬರಿಗಳ ಅಧ್ಯಯನ ನನ್ನ ಶೀರ್ಷಿಕೆಗೆ ಅನುಗುಣವಾಗಿ ಪೂರ್ತಿಯಾಗಿದೆ ಎಂದು ಹೇಳುವುದು ಹುಂಬತನದ ಮಾತಾಗುತ್ತದೆ. ಶೀರ್ಷಿಕೆಗೆ ಅನುಗುಣವಾಗಿ ಪಾರ್ಶ್ವಿಕವಾಗಿಯಾದರೂ ತೇಜಸ್ವಿ ಕಾದಂಬರಿಗಳ ಅಧ್ಯಯನವಾಗಿದೆ ಎಂದರೆ ಈ ಅಧ್ಯಯನವು ಸಾರ್ಥಕತೆಯನ್ನು ಪಡೆಯುತ್ತದೆ. ತೇಜಸ್ವಿಯವರನ್ನು ಗ್ರಹಿಸುವ ಮತ್ತಷ್ಟು ಆಯಾಮಗಳು ನಮ್ಮ ಮುಂದಿವೆ. ಅವುಗಳ ಕಡೆಗೆ ದೃಷ್ಟಿ ಹರಿಸಿ ಮಂದಣ್ಣ ಕರ್ವಾಲೊ ಜೊತೆಗೆ ಸಾಗಿ ನಮ್ಮ 'ಸ್ಮೃತಿ'ಯನ್ನು ಹುಡುಕುವ ಕಾರ್ಯಕ್ಕೆ ಕೈ ಜೋಡಿಸುವ ಮಹತ್ಕಾರ್ಯ ಆಗಬೇಕಾಗಿದೆ.

ತಮ್ಮ ವಿಶಿಷ್ಟ ಬರವಣಿಗೆಯಿಂದ ಓದುಗರನ್ನು ತನ್ನೆಡೆಗೆ ಸೆಳೆದ ತೇಜಸ್ವಿಯವರ ದೃಷ್ಟಿಕೋನ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದದ್ದು. ತಮ್ಮ ಸಾಹಿತ್ಯವನ್ನು ತತ್ವಸಿದ್ಧಾಂತಗಳ

ಹಂಗಿಲ್ಲದೆ ಓದುಗನ ನೆಲೆಯಲ್ಲಿ ಸೃಷ್ಟಿಯಾದಂತಹ ತೇಜಸ್ವಿ ಸಾಹಿತ್ಯ ಹಲವಾರು ಅನುಭವಗಳನ್ನು ಓದುಗರಿಗೆ ತಲುಪಿಸುತ್ತವೆ ಮತ್ತು ಸಮಾಜದ ಆಗು ಹೋಗುಗಳ ಬಗ್ಗೆ ಚಿಂತಿಸುವಂತೆ ಮಾಡುತ್ತದೆ. ಈ ನಿಟ್ಟಿನಲ್ಲಿ ತೇಜಸ್ವಿ ಸಾಹಿತ್ಯ ಸಮಾಜಮುಖಿಯಾಗಿ ವಿಶಿಷ್ಟವೆನಿಸುತ್ತದೆ.

ವಿಸ್ಮಯ ಬೆರಗು ಶೋಧನಾಗುಣ ಈ ವಿಶಿಷ್ಟ ಅಂಶಗಳಿಂದ ಸದಾ ಶೋಧನೆಯಲ್ಲಿಯೇ ಮನುಷ್ಯ ತೊಡಗಬೇಕೆಂದು ತೇಜಸ್ವಿರವರು ತನ್ನ ಸಾಹಿತ್ಯದ ಮುಖಾಂತರ ಓದುಗನಿಗೆ ಮಾರ್ಗದರ್ಶನವನ್ನು ನೀಡುತ್ತಾರೆ.

## ಅನುಬಂಧ-೧

## ಆಕರ ಗ್ರಂಥಸೂಚಿ


೧. ಪೂರ್ಣಚಂದ್ರತೇಜಸ್ವಿ : 'ಕರ್ವಾಲೊ',
ಪ್ರಕಾಶನ: ಪುಸ್ತಕ ಪ್ರಕಾಶನ,
ಮೈಸೂರು, ೨೩ನೇ ಮುದ್ರಣ, ೨೦೦೭.

೨. ಪೂರ್ಣಚಂದ್ರ ತೇಜಸ್ವಿ : 'ಜುಗಾರಿ ಕ್ರಾಸ್',
ಪ್ರಕಾಶನ: ಪುಸ್ತಕ ಪ್ರಕಾಶನ,
ಮೈಸೂರು, ೫ನೇ ಮುದ್ರಣ, ೨೦೦೪.

೩. ಪೂರ್ಣಚಂದ್ರ ತೇಜಸ್ವಿ : 'ಚಿದಂಬರ ರಹಸ್ಯ' ,
ಪ್ರಕಾಶನ: ಪುಸ್ತಕ ಪ್ರಕಾಶನ,
ಮೈಸೂರು, ೮ನೇ ಮುದ್ರಣ, ೨೦೦೪.

೪. ಪೂರ್ಣ ಚಂದ್ರ ತೇಜಸ್ವಿ : ಮಾಯಾಲೋಕ',
ಪ್ರಕಾಶನ: ಪುಸ್ತಕ ಪ್ರಕಾಶನ,
ಮೈಸೂರು, ೧ನೇ ಮುದ್ರಣ, ೨೦೦೬.

೫. ಪೂರ್ಣಚಂದ್ರ ತೇಜಸ್ವಿ : 'ನಿಗೂಢ ಮನುಷ್ಯರು',
ಪ್ರಕಾಶನ: ಪುಸ್ತಕ ಪ್ರಕಾಶನ,
ಮೈಸೂರು, ೪ನೇ ಮುದ್ರಣ, ೨೦೦೪.

೬. ಪೂರ್ಣಚಂದ್ರ ತೇಜಸ್ವಿ : 'ಸ್ವರೂಪ' ,
ಪ್ರಕಾಶನ: ಪುಸ್ತಕ ಪ್ರಕಾಶನ,
ಮೈಸೂರು, ೪ನೇ ಮುದ್ರಣ, ೨೦೦೪.

೭. ಜಿ.ಟಿ. ವೀರಪ್ಪ (ಸಂ.) ಡಾ. ಎಂ. ಭೈರೇಗೌಡ : 'ತೇಜಸ್ವಿ ಸಾಹಿತ್ಯ ಕೃಷಿ',
ಪ್ರಕಾಶಕರು : ಕರ್ನಾಟಕ ಸಾಹಿತ್ಯ ಅಕಾಡೆಮಿ,
ಬೆಂಗಳೂರು, ೧ನೇ ಮುದ್ರಣ, ೨೦೦೪.

೮. ಟಿ.ಪಿ. ಅಶೋಕ : 'ತೇಜಸ್ವಿ ಕಥನ',
ಅಕ್ಷರ ಪ್ರಕಾಶನ, ಸಾಗರ,
೧ನೇ ಮುದ್ರಣ, ೨೦೦೪.

೯. ಡಿ.ವಿ. ಪ್ರಹ್ಲಾದ್ (ಸಂ.) : 'ತೇಜಸ್ವಿಲೋಕ' ವಿಶೇಷ ಸಂಚಿಕೆ-೧,
ಪ್ರಕಾಶಕರು : ಸಂಚಯ ಬೆಂಗಳೂರು,
ಮೊದಲನೇ ಮುದ್ರಣ ೨೦೦೭.

೧೦. ಎಚ್.ಎಂ. ಮಹೇಶ್ವರಯ್ಯ (ಸಂ.): ಪೂರ್ಣಚಂದ್ರ ತೇಜಸ್ವಿ',
ಪ್ರಕಾಶಕರು: ನವಕರ್ನಾಟಕ ಪ್ರಕಾಶನ,
ಬೆಂಗಳೂರು, ೧ನೇ ಮುದ್ರಣ, ೨೦೦೨.

೧೧. ಡಾ. ಎಚ್. ಶಶಿಕಲಾ : 'ಏಕ ಅನೇಕ',
ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು,
ಮೊದಲನೇ ಮುದ್ರಣ ೨೦೦೫.

೧೨. ಲಂಕೇಶ್ : ಪ್ರಸ್ತುತ', ಲಂಕೇಶ್ ಪ್ರಕಾಶನ,
ಬೆಂಗಳೂರು, ೨ನೇ ಮುದ್ರಣ, ೨೦೦೬.

೧೩. ಪೂರ್ಣಚಂದ್ರ ತೇಜಸ್ವಿ : 'ಅಲೆಮಾರಿಯ ಅಂಡಮಾನ್ ಮತ್ತು
ಮಹಾನದಿ ನೈಲ್',
ಪ್ರಕಾಶಕರು: ಪುಸ್ತಕ ಪ್ರಕಾಶನ,
ಮೈಸೂರು, ೮ನೇ ಮುದ್ರಣ, ೨೦೦೭.

೧೪. ನರಹಳ್ಳಿ ಬಾಲಸುಬ್ರಹ್ಮಣ್ಯ : 'ಸಾಹಿತ್ಯ ಸಂಸ್ಕೃತಿ',
ಪ್ರಕಾಶಕರು : ಅಂಕಿತ ಪ್ರಕಾಶನ,
ಬೆಂಗಳೂರು, ಮೊದಲನೇ ಮುದ್ರಣ ೧೯೯೮

೧೫. ಪೂರ್ಣಚಂದ್ರ ತೇಜಸ್ವಿ : 'ಪರಿಸರದ ಕಥೆ',
ಪ್ರಕಾಶಕರು : ಪುಸ್ತಕ ಪ್ರಕಾಶನ, ಮೈಸೂರು,
೬ನೇ ಮುದ್ರಣ, ೧೯೯೭

೧೬. ಕೃಷ್ಣಪರಮೇಶ್ವರಭಟ್ಟ : 'ಅರ್ಥರೇಖೆ',
ಪ್ರಕಾಶಕರು : ಕನ್ನಡ ಸಂಘ ಕ್ರೈಸ್ಟ್ ಕಾಲೇಜು,
ಬೆಂಗಳೂರು,
ಮೊದಲ ಮುದ್ರಣ, ೨೦೦೭.

೧೭. ಪೂರ್ಣಚಂದ್ರ ತೇಜಸ್ವಿ : 'ವ್ಯಕ್ತಿ ವಿಶಿಷ್ಟ ಸಿದ್ಧಾಂತ ಮತ್ತು ಯಮಳ
ಪ್ರಶ್ನೆ', ಪ್ರಕಾಶಕರು : ಪುಸ್ತಕ ಪ್ರಕಾಶನ,
ಮೈಸೂರು, ಮೊದಲನೇ ಮುದ್ರಣ, ೨೦೦೮.

೧೮. ಪೂರ್ಣಚಂದ್ರತೇಜಸ್ವಿ : 'ಬೃಹನ್ನಳೆ ಸೋಮುವಿನ ಸ್ವಗತ ಲಹರಿ
ಮತ್ತು ಇತರ ಕವನಗಳು'
ಪ್ರಕಾಶಕರು : ಪುಸ್ತಕ ಪ್ರಕಾಶನ, ಮೈಸೂರು,
ಮೊದಲನೇ ಮುದ್ರಣ, ೨೦೦೮

೧೯. ಚಂದ್ರಶೇಖರ ಐಜೂರು(ಸಂ.) : 'ಕನ್ನಡ ಟೈಮ್ಸ್ ಬರಹಗಳು', ಸಂಪುಟ-೧,
ನಟರಾಜ್ ಹುಳಿಯಾರ್ ಕನ್ನಡ ಟೈಮ್ಸ್ ಪ್ರಕಾಶನ, ಬೆಂಗಳೂರು.
ಮೊದಲನೇ ಮುದ್ರಣ, ೨೦೦೮

## ಅನುಬಂಧ-೨

## ತೇಜಸ್ವಿ ಸಾಹಿತ್ಯ

**ಕಾದಂಬರಿಗಳು**

೧. ಕರ್ವಾಲೊ : ೧೯೮೦
೨. ಚಿದಂಬರ ರಹಸ್ಯ : ೧೯೮೫
೩. ಜುಗಾರಿ ಕ್ರಾಸ್ : ೧೯೯೪
೪. ಮಾಯಾಲೋಕ : ೨೦೦೬

**ಕಿರುಕಾದಂಬರಿಗಳು**

೧. ಸ್ವರೂಪ : ೧೯೬೬
೨. ನಿಗೂಢ ಮನುಷ್ಯರು : ೧೯೭೩

**ಕಥಾಸಂಕಲನಗಳು**

೧. ಹುಲಿಯೂರಿನ ಸರಹದ್ದು : ೧೯೬೨
೨. ಅಬಚೂರಿನ ಪೋಸ್ಟಾಫೀಸು : ೧೯೭೩
೩. ಕಿರಗೂರಿನ ಗಯ್ಯಾಳಿಗಳು : ೧೯೯೧

**ಕವನ ಸಂಕಲನ**

೧. ಬೃಹನ್ನಳೆ ಸೋಮುವಿನ
ಸ್ವಗತ ಲಹರಿ : ೧೯೬೨

**ಪ್ರವಾಸ ಕಥನ**

೧. ಅಲೆಮಾರಿಯ ಅಂಡಮಾನ್ ಮತ್ತು
ಮಹಾನದಿ ನೈಲ್ : ೧೯೯೦

**ನಾಟಕ**

೧. ಯಮಳ ಪ್ರಶ್ನೆ : ೧೯೬೪

**ಜೀವನ ಚರಿತ್ರೆ / ಆತ್ಮಚರಿತ್ರೆ**

೧. ಅಣ್ಣನ ನೆನಪು : ೧೯೯೩

**ವೈಚಾರಿಕ ಬರಹ**

೧. ವ್ಯಕ್ತಿ ವಿಶಿಷ್ಟ ಸಿದ್ಧಾಂತ : ೧೯೬೪

## ಪರಿಸರದ ಸಾಹಿತ್ಯ



## ವಿಸ್ಮಯ ಮಾಲಿಕೆ

## ಮಿಲೇನಿಯಂ ಸರಣಿ

೧. ಹುಡುಕಾಟ (ಮಿಲೇನಿಯಂ -೧)
೨. ಜೀವನ ಸಂಗ್ರಾಮ(ಮಿಲೇನಿಯಂ-೨)
೩. ಫೆಸಿಫಿಕ್ ದ್ವೀಪಗಳು (ಮಿಲೇನಿಯಂ-೩)
೪. ಚಂದ್ರನ ಚೂರು (ಮಿಲೇನಿಯಂ -೪)
೫. ನೆರೆಹೊರೆಯ ಗೆರೆಗಳು (ಮಿಲೇನಿಯಂ -೫)
೬. ಮಹಾಯುದ್ಧ -೧ ( ಮಿಲೇನಿಯಂ-೬)
೭. ಮಹಾಯುದ್ಧ-೨ (ಮಿಲೇನಿಯಂ-೭)
೮. ಮಹಾಯುದ್ಧ-೩ (ಮಿಲೇನಿಯಂ-೮)
೯. ದೇಶವಿದೇಶ-೧ (ಮಿಲೇನಿಯಂ-೯)
೧೦. ದೇಶವಿದೇಶ-೨ (ಮಿಲೇನಿಯಂ-೧೦)
೧೧. ದೇಶವಿದೇಶ-೩ (ಮಿಲೇನಿಯಂ-೧೧)
೧೨. ದೇಶವಿದೇಶ-೪ (ಮಿಲೇನಿಯಂ-೧೨)
೧೩. ವಿಸ್ಮಯ ವಿಶ್ವ-೧(ಮಿಲೇನಿಯಂ-೧೩)
೧೪. ಮಹಾಪಲಾಯನ (ಮಿಲೇನಿಯಂ-೧೪)
೧೫. ವಿಸ್ಮಯ ವಿಶ್ವ (ಮಿಲೇನಿಯಂ-೧೫)
೧೬. ಅಡ್ವೆಂಚರ್ (ಮಿಲೇನಿಯಂ-೧೬)
೧೭. ಪ್ಯಾಪಿಲಾನ್ ಭಾಗ-೧, ಭಾಗ-೨

## ಅನುವಾದ

ಲೋಹಿಯಾ